# ಸಿದ್ಧಗಂಗಾ

ಸಂಪುಟ-೨೨ ಸಂಚಿಕೆ-೩ ಮಾರ್ಚ್, ೧೯೮೬

## ಶ್ರೀ ಸಿದ್ಧಗಂಗಾ ಗುರುಕರಣ ತ್ರಿವಿಧಿ

ಶರಣರ ಬಾಳೆಂಬುದು ಅರಿವಿನ ಹಂದರ
ನಿರುತಧ್ಯಾನವ ಮಾಡು ಶರಣನು । ನೀನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ನೀನಿತ್ತ ಶಿವತುತ್ತು ಎನ್ನ ಹರಣದ ಬಿತ್ತು
ನೀನಿತ್ತ ನುಡಿಮುತ್ತು ಬೆಳಗಿತ್ತು । ಜೀವನವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಮಠವೆಲ್ಲ ನೀವೆ ನೀವೆಲ್ಲ ಶ್ರೀ ಮಠವೆ
ಅಟಮಟವಿಲ್ಲದ ಶಿವಬೆಳಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

—ಹೆಚ್.ವಿ. ವೀರಭದ್ರಯ್ಯ.

# ಸಿದ್ಧಗಂಗಾಂತರಂಗ









# ಶ್ರೀವಾಣಿ

ಕಾಲ ಅತ್ಯಮೂಲ್ಯವಾದದ್ದು. ಅದಕ್ಕಾಗಿಯೇ "ಮುತ್ತು ಕಳೆದರೆ ಸಿಕ್ಕೀತು ; ಹೊತ್ತು ಕಳೆದರೆ ಸಿಕ್ಕೀತೆ"? ಎಂಬುದಾಗಿ ತಿಳಿದವರು ಪ್ರಶ್ನಿಸಿದ್ದಾರೆ. ಸಮಯ ಹೇಗೆ ಬೆಲೆ ಬಾಳತಕ್ಕದ್ದೋ ಹಾಗೇ ಏಕ ರೀತಿಯದೂ ಆಗಿದೆ. ಅಂದರೆ ವಿದ್ಯಾರ್ಥಿಗಳಿಗೆ ಪರೀಕ್ಷಾ ಸಮಯ ಅತ್ಯಮೂಲ್ಯವಾದುದು; ವರ್ಷಾವಧಿಯ ಉಳಿದ ಸಮಯ ಕಡಿಮೆ ಮಹತ್ವವುಳ್ಳದ್ದು ಎಂಬ ತಪ್ಪು ಅಭಿಪ್ರಾಯವಾಗುತ್ತದೆ. ಎಲ್ಲ ಸಮಯವೂ ಏಕರೀತಿಯ ಮೌಲ್ಯ ಅಥವಾ ಮಹತ್ವವುಳ್ಳದ್ದು. ಆದರೆ ಇಂದಿನ ಬಹುತೇಕ ವಿದ್ಯಾರ್ಥಿಗಳ ಧೋರಣೆ ಇದಕ್ಕೆ ವಿರುದ್ಧವಾದುದು. "ಯುದ್ಧಕಾಲೇ ಶಸ್ತ್ರಾಭ್ಯಾಸಃ" ಎಂಬುದು ಇಂದಿನ ವಿದ್ಯಾರ್ಥಿಗಳ ಮನೋಭಾವವಾಗಿದೆ. ಈ ವಿಚಾರವು ಕೇವಲ ವಿದ್ಯಾರ್ಥಿ ಸಮುದಾಯಕ್ಕೇ ಸೀಮಿತವಲ್ಲ. ಎಲ್ಲ ಬಗೆಯ ಮತ್ತು ಎಲ್ಲ ವರ್ಗದ ಜನರಲ್ಲಿಯೂ ಈ ಭಾವನೆ ಬಂದಿರುವುದು ಖೇದಕರ. ಅತ್ಯಮೂಲ್ಯವಾದ ಸಮಯವನ್ನು ಸದುಪಯೋಗಪಡಿಸಿಕೊಳ್ಳಲಿ ಬಿಡಲಿ ಅದು ನಮ್ಮ ಪಾಲಿಗೆ ಎಂದೆಂದಿಗೂ ವ್ಯಯವಾಯಿತೆಂದೇ ತಿಳಿಯಬೇಕು. ಸದ್ವಿನಿಯೋಗವಾದಾಗ ಮಾತ್ರ ಅದಕ್ಕೆ ಸಾರ್ಥಕತೆ; ಇಲ್ಲವಾದಲ್ಲಿ ಅದು ವ್ಯಯವಾದಂತೆಯೇ ಸರಿ. ಹಣ ಖರ್ಚಾದರೆ ಪುನಃ ಆರ್ಜಿಸಬಹುದು, ಆದರೆ ಕ್ಷಣ ಜಾರಿದರೆ ಪುನರಾಗಮಿಸದು. ನಮ್ಮ ನಿತ್ಯದ ಚಿಂತನೆ 'ಕಾಲದ ಸದುಪಯೋಗವಾಯಿತೇ? ಅಥವಾ ಇಲ್ಲವೇ?' ಎಂಬುದಾದರೆ ಮಾತ್ರ ಕಾಲದ ಬೆಲೆ ಅರಿಯಲು ಸಾಧ್ಯವಾಗುತ್ತದೆ; ಪ್ರತಿ ಕ್ಷಣವನ್ನು ಸದುಪಯೋಗಪಡಿಸಿಕೊಳ್ಳಲು ಸಹಾಯಕವಾಗುತ್ತದೆ. ಒಂದೇ ಸಮಯದಲ್ಲಿ ಒಬ್ಬ ವ್ಯಕ್ತಿ ಮಹತ್ಕಾರ್ಯವನ್ನೆಸಗುತ್ತಾನೆ. ಅವನಿಗೆ ಯಶಸ್ಸಿನ ಫಲ ದೊರೆಯುತ್ತದೆ; ಇನ್ನೊಬ್ಬ ದುಷ್ಕೃತ್ಯವೆಸಗುತ್ತಾನೆ ಮತ್ತು ಅಪಯಶಸ್ಸನ್ನು ಹೊಂದುತ್ತಾನೆ; ಮತ್ತೊಬ್ಬ ಆಗ ನಿಷ್ಕ್ರಿಯನಾಗಿಯೇ ಕುಳಿತಿರುತ್ತಾನೆ ಎಂದು ಭಾವಿಸಿದರೂ ಅವನ ಪಾಲಿಗೂ ಆ ಸಮಯ ವ್ಯಯವಾದಂತೆಯೇ ಆಗುತ್ತದೆ. ಸಮಯ ಯಾರನ್ನೂ ಕಾಯುವುದಿಲ್ಲ. Time and tide wait for no man. ಅದು ಬಂದೇ ಬರುತ್ತದೆ. ಅದರ ಸದುಪಯೋಗ ವಿವೇಕಿಗಳ ಲಕ್ಷಣ. ಜೀವನದ ಪ್ರತಿಕ್ಷಣವೂ, ಮಹತ್ತರವಾದುದು ಎಂದು ತಿಳಿಯದ ಹೊರತು ಕಾಲದ ಸದುಪಯೋಗ ಸಾಧ್ಯವಿಲ್ಲವಾಗುತ್ತದೆ.

| | |
|---|---|
| **"ಸಿದ್ಧಗಂಗಾ" ಮಾಸ ಪತ್ರಿಕೆ**<br>ಶ್ರೀ ಸಿದ್ಧಗಂಗಾ ಮಠ-572104<br>ತುಮಕೂರು ಜಿಲ್ಲೆ. | **ಲೇಖಕರಲ್ಲಿ ಮನವಿ**<br>'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ಶೀಘ್ರ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು. |
| ಪ್ರಧಾನ ಸಂಪಾದಕರು<br>ಹಂ. ಚನ್ನಪ್ಪ ಎರೇಸೀಮೆ<br>ಸಂಪಾದಕರು<br>ಹೆಚ್. ವಿ. ವೀರಭದ್ರಯ್ಯ<br>* * *<br>ಸಹ ಸಂಪಾದಕರು<br>ಓ. ಎಸ್. ಚಂದ್ರಶೇಖರಯ್ಯ<br>ಬಸವರಾಜು<br>* * *<br>ಜಾಹೀರಾತು ವಿಭಾಗ<br>ಎಂ. ರೇಣುಕಾರಾಧ್ಯ<br>* * *<br>ಪ್ರಸಾರ ವಿಭಾಗ<br>ಆರ್. ಎಸ್. ಮಲ್ಲೇಶಪ್ಪ<br>* * *<br>ಪ್ರಕಾಶಕರು<br>ಹೆಚ್. ಬಿ. ಗಂಗಾಧರಯ್ಯ<br>ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ<br>* * *<br>ಮುದ್ರಕರು<br>ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ<br>* * *<br>ಪ್ರಕಟಣೆಯ ಸ್ಥಳ<br>ಶ್ರೀ ಸಿದ್ಧಗಂಗಾ ಕ್ಷೇತ್ರ | "ಸಂಪಾದಕರು"<br>'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ<br>ಶ್ರೀ ಸಿದ್ಧಗಂಗಾ ಕ್ಷೇತ್ರ-572104<br>ತುಮಕೂರು ಜಿಲ್ಲೆ.<br>ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ. |
| **ಚಂದಾ ವಿವರ**<br>ವಾರ್ಷಿಕ ಚಂದಾ 20-00 ರೂ<br>ಆಜೀವ ಸದಸ್ಯತ್ವ 201-00 ರೂ | |



# ಸಂಪಾದಕೀಯ

## ಮೌಲ್ಯ ನಿಷ್ಠ ಸದ್ವ್ಯಕ್ತಿ:

ಶ್ರೀ ರಾಮಕೃಷ್ಣ ಹೆಗ್ಗಡೆ. ಕರ್ನಾಟಕದ ಮುಖ್ಯ ಮಂತ್ರಿ ಜನತಾ ಪಕ್ಷದ ಆಧಾರಸ್ತಂಭ ಜನಮನವನ್ನು ಗೆದ್ದ ಧೀಮಂತ ರಾಜಕೀಯ ಪಟು ಅಸದೃಶ ಮುತ್ಸದ್ದಿ. ರಾಜಕಾರಣದಲ್ಲಿ ಶ್ರೀಮಂತ ಅನುಭವ. ಎಂಥ ವಿಷಮ ಪರಿಸ್ಥಿತಿಯಲ್ಲೂ ಸಂಯಮ ಕಳೆದು ಕೊಳ್ಳದ ವಿವೇಕ ಶೀಲ. ರಾಜ್ಯ ರಥವನ್ನು ಅಭಿವೃದ್ಧಿ ಪಥದಲ್ಲಿ ನಡೆಸಲು ಸಮರ್ಥ ಪ್ರಯತ್ನ, ರಾಷ್ಟ್ರಮಟ್ಟದ ವ್ಯಕ್ತಿತ್ವ; ಅಂತರಾಷ್ಟ್ರೀಯ ಖ್ಯಾತಿ, ಮಾನವೀಯ ಮೌಲ್ಯಗಳ ಆರಾಧಕ. ನೆಟ್ಟ ನೈಲಿಗಲ್ಲುಗಳನ್ನು ರಾಜ್ಯದ ಜನತೆ ಬಲ್ಲರು. ಲೋಕಸಭಾ ಚುನಾವಣೆಯ ಫಲಿತಾಂಶ ಪ್ರಕಟವಾದಾಗ ರಾಜಿನಾಮೆ ನೀಡಿ ಸತ್ಸಂಪ್ರದಾಯ ಹಾಕಿದರು. ವಿಧಾನ ಸಭಾ ಚುನಾವಣೆಯಲ್ಲಿ ಪ್ರಚಂಡ ಜಯ ತಂದು ಕೊಟ್ಟರು ಪಕ್ಷಕ್ಕೆ. ಎಂಥ ಸಮಯದಲ್ಲಿಯೂ ಧೈರ್ಯ ಕಳೆದು ಕೊಳ್ಳದ ನಗು ಮುಖ. ಗೀತೆಯ 'ಸ್ಥಿತ ಪ್ರಜ್ಞ' ಲಕ್ಷಣ ಮೊನ್ನೆ 'ಬಾಟ್ಲಿಂಗ್' ಹಗರಣದ ಸಂಬಂಧವಾಗಿ ರಾಜಿನಾಮೆ ಕೊಟ್ಟ ಪಕ್ಷ ನಿಷ್ಠೆ ನ್ಯಾಯಾಲಕ್ಕೆ ಗೌರವ ತೋರಿದ ಸತ್ಸಂಪ್ರದಾಯ. ರಾಜಕಾರಣಿಗಳಲ್ಲಿ ಹಗಲು ಪಂಜು ಹಿಡಿದು ಹುಡುಕಿದರೂ ಸಿಗದಂಥ ಅಪರೂಪ ಗುಣ ಕರ್ನಾಟಕದ ಭಾಗ್ಯ. ಪುಣ್ಯ ಕೋಟಿಯಂತ ಗೋವಿಗೆ ಜನ್ಮವಿತ್ತದ್ದಲ್ಲವೆ ಈ ರಾಜ್ಯ? ಮಾನ್ಯ ರಾಮಕೃಷ್ಣ ಹೆಗ್ಗಡೆಯವರ ನಡವಳಿಕೆ ಆದರ್ಶಣೀಯ. ಅನುಕರಣೀಯ. ರಾಜಿನಾಮೆ ಬೇಡ, ಹಿಂದಕ್ಕೆ ಪಡೆಯಿರಿ ಎಂದವರೇ ಹೆಚ್ಚು ವಿರೋಧ ಪಕ್ಷದವರನ್ನು ಹೊರತು ಪಡಿಸಿ. ರಾಷ್ಟ್ರ ಮಟ್ಟದ ವರಿಷ್ಠರಾದಿಯಾಗಿ ಆಗ್ರಹ. ರಾಜಿನಾಮೆ ಬೇಡ ಎಂದು ಪ್ರಜಾ ಪ್ರೀತಿಯ ಪ್ರಚಂಡ ಪ್ರವಾಹದೆದುರು ಹೆಗ್ಗಡೆಯವರು ಭಾವಮುಗ್ಧ. ಆದರೂ ರಾಜಿನಾಮೆಗೆ ಸತ್ಸಂಪ್ರದಾಯಕ್ಕೆ ನಿಷ್ಠೆ. ಇದೊಂದು ಅಪರೂಪದ ಉದಾಹರಣೆ. ಕರ್ನಾಟಕ ರಾಜ್ಯ ಕಂಡ ಅಪೂರ್ವ ಮುಖ್ಯಮಂತ್ರಿ ಸರ್ವ— ವಿಷಮಗಳನ್ನೆಲ್ಲ ಸಮನ್ವಯಿಸಿಕೊಂಡು ಮುನ್ನಡೆದಿದ್ದ ಮಹಾಸಾಹಸಿ. ಹೆಗ್ಗಡೆಯವರು ಬೆಟ್ಟ ಹತ್ತಿ ನಿಲ್ಲುವ ಆದರ್ಶವಲ್ಲ; ಬೆಟ್ಟ ಹೊತ್ತು ನಿಲ್ಲುವ ಆದರ್ಶ. ಇದೀಗ ಅವರ ರಾಜಿನಾಮೆ ಅಂಗೀಕೃತ ಮತ್ತೆ ನಾಯಕರ ಆಯ್ಕೆ, ಇದೆಲ್ಲ ಮಾಮೂಲು, ಆದರೆ ಮಾನ್ಯ ರಾಮಕೃಷ್ಣ ಹೆಗ್ಗಡೆಯವರ ನಾಯಕತ್ವ ನಿಜಕ್ಕೂ ಅರ್ಥಪೂರ್ಣ. ಅವರು ಬೆಳೆದು ಬಂದ ಗರಡಿ ಹಿರಿಯ ರಾಜಕಾರಣಿಗಳ ರಾಷ್ಟ್ರಭಕ್ತರ, ದೂರನೋಟವುಳ್ಳ ಹಿರಿಯರ ಕರ್ಮ ಭೂಮಿ. ಶಾಸಕ ಬಂಧುಗಳು,

ರಾಜ್ಯದ ಜನತಾ ಜಗದೀಶರು ಅಖಂಡ ಪ್ರೀತಿಯನ್ನೇ ಹೆಗ್ಗಡೆಯವರ ಬಗ್ಗೆ ವ್ಯಕ್ತ ಮಾಡಿದ್ದಾರೆ ಕನ್ನಡಿಗರ ಸುಸಂಸ್ಕೃತಿಗೆ ಇದು ಇನ್ನೊಂದು ನಿದರ್ಶನ. "ನಮಗೆ ನೀವು ಬೇಕು"— ಎನ್ನುವಂತೆ ಬಾಳಬೇಕು ಎಂಬುದಕ್ಕೆ ಮಾನ್ಯ ರಾಮಕೃಷ್ಣ ಹೆಗ್ಗಡೆಯವರು ಸ್ಪಷ್ಟ ಉದಾಹರಣೆ. ಯುವಜನಾಂಗ ಇತ್ತ ಕಡೆ ಗಮನಿಸಲಿ.

॥ ಶ್ರೀ ಗುರು ಬಸವಲಿಂಗಾಯ ನಮಃ ॥
ಅವಾಚ್ಯಾತ್ಮ ಸ್ವರೂಪಾಯ ಶಿವಭಾವಪ್ರದಾಯಿನೆ ।
ನಮಸ್ಸದ್ಗುರುನಾಥಾಯ ಷಟ್ಸ್ಥಲ ಬ್ರಹ್ಮಮೂರ್ತಯೇ ॥

## ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ರಥೋತ್ಸವಾಹ್ವಾನ ಪತ್ರಿಕಾ

ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು
ಶ್ರೀ ---------------------------------------

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನಶಕ ೧೯೦೭ಕ್ಕೆ ಸರಿಯಾದ
ಶ್ರೀ ಕ್ರೋಧನ ನಾಮ ಸಂವತ್ಸರದ

| | | | | |
|---|---|---|---|---|
| ಮಾಘ ಬಹುಳ | ೧೩ | ಶನಿವಾರ | 8-3-86 | ಮಹಾ ಶಿವರಾತ್ರಿ ಪೂಜಾದಿಗಳು |
| .. .. | ೧೪ | ಭಾನುವಾರ | 9-3-86 | ರಥೋತ್ಸವ ಮತ್ತು ವೃಷಭ ವಾಹನ |
| .. .. | ೩೦ | ಸೋಮವಾರ | 10-3-86 | ಹುಲಿವಾಹನ ಮತ್ತು ಸಿಂಹವಾಹನ |
| ಫಾಲ್ಗುಣ ಶುದ್ಧ | ೧ | ಮಂಗಳವಾರ | 11-3-86 | ಮುತ್ತಿನ ಪಾಲಕಿ ಉತ್ಸವ<br>ನವರಂಗ ಪಾಲಕಿ ಉತ್ಸವ |
| .. .. | ೨ | ಬುಧವಾರ | 12-3-86 | ಬೆಳ್ಳಿ ಪಾಲಕಿ ಉತ್ಸವ<br>ಅಶ್ವವಾಹನ |
| .. .. | ೩ | ಗುರುವಾರ | 13-3-86 | ಬಿಲ್ವ ವೃಕ್ಷವಾಹನ<br>ತೆಪ್ಪೋತ್ಸವ |
| .. .. | ೪ | ಶುಕ್ರವಾರ | 14-3-86 | ನಂದಿವಾಹನ<br>ಪಂಚಬ್ರಹ್ಮೋತ್ಸವ |

ಈ ವರ್ಷ ಮೊದಲೇ ತಿಳಿಸಿರುವಂತೆ ದನಗಳ ಮೇವುಗಳ ಕೊರತೆ, ನೀರಿನ ಅಭಾವಗಳಿಂದಲೂ ಮತ್ತು ಕಸಾಯಿ ಖಾನೆಗೆ ಅಧಿಕ ಸಂಖ್ಯೆಯಲ್ಲಿ ದನಗಳನ್ನು ಮಾರಾಟ ಮಾಡುವ ಪ್ರವೃತ್ತಿಯನ್ನು ಸಾಧ್ಯವಾದಷ್ಟು ಕಡಿಮೆ ಮಾಡುವುದಕ್ಕಾಗಿಯೂ ಎತ್ತಿನ ಪರಿಷೆಯನ್ನು ನಿಲ್ಲಿಸಿರುತ್ತೆ. ಕದಂಗವಾ ವಸ್ತುಪ್ರದರ್ಶನವು ನಡೆಯುವುದಿಲ್ಲ. ಸರ್ವರೂ ಸಕಾಲದಲ್ಲಿ ಬಂದು ಉತ್ಸವಗಳಲ್ಲಿ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಕೃಪೆಗೆ ಪಾತ್ರರಾಗಬೇಕೆಂದು ಅಪೇಕ್ಷಿಸುತ್ತೇವೆ.

ಶ್ರೀ ಸಿದ್ಧಗಂಗಾ ಕ್ಷೇತ್ರ
ತುಮಕೂರು ಜಿಲ್ಲಾ.

ಶ್ರೀ ಶ್ರೀ ಸ್ವಾಮಿಗಳು

# ಮಾಣಿಕ್ಯ ದೀಪ್ತಿ

—ವಿದ್ವಾನ್ ಎಸ್. ಷಡಕ್ಷರಿ, M.A., B.Ed.,
ಸಂಸ್ಕೃತ ಕಾಲೇಜು, ಸಿದ್ಧಗಂಗಾ ಮಠ.

ಈ ಮಾಣಿಕ್ಯ ದೀಪ್ತಿಯು ಚಿಂತನದ ವಸ್ತು ಶಿಕ್ಷಕನನ್ನು ಕುರಿತದ್ದು

ಶಿಕ್ಷಕನಿಗೆ, ಗುರು–ಆಚಾರ್ಯ ಎಂಬುದಾಗಿಯೂ ಸಂಬೋಧಿಸುವುದುಂಟು 'ಗುರು ಅಥವಾ ಶಿಕ್ಷಕ' ಎಂದರೆ ವಿದ್ಯಾರ್ಥಿಯಲ್ಲಿರುವ ಅಜ್ಞಾನವನ್ನು ದೂರಮಾಡಿ ಸುಜ್ಞಾನ ಮಾರ್ಗದಲ್ಲಿ ಕೊಂಡೊಯ್ಯುವ 'ದಾರಿದೀಪವಿದ್ದಂತೆ' ಎಂಬುದಾಗಿ ನಮ್ಮ ಪ್ರಸ್ತುತ ಭಾವನೆ.

ಗುರು ಅಥವಾ ಶಿಕ್ಷಕಸ್ಥಾನ ಮಹತ್ತರವಾದುದು, ಆದಕ್ಕಾಗಿಯೇ ನಮ್ಮ ಪ್ರಾಚೀನ ಕಾವ್ಯಗಳು–ಗುರುರ್ದೇವೋ ಮಹಾದೇವೋ ಗುರುದೇವಃ ಸದಾಶಿವಃ। ಗುರು ಸಾಕ್ಷಾತ್ ಪರಬ್ರಹ್ಮ ಎಂದು ಸಾರಿರಬೇಕು. ' ಆದ್ದರಿಂದ ಗುರುಗಳಾದವರು ಅಷ್ಟು ಉತ್ಕೃಷ್ಟರಾಗಿರಬೇಕು. ಅಂದರೆ ಕೇವಲ ದೈಹಿಕ ಶೋಕವಲ್ಲ ಮಾನಸಿಕವಾಗಿ, ಬೌದ್ಧಿಕವಾಗಿ, ಆಧ್ಯಾತ್ಮಿಕವಾಗಿ ಹೀಗೆ ಎಲ್ಲ ರಂಗಗಳಲ್ಲಿಯೂ ಶ್ರೇಷ್ಠತೆ ಪಡೆದಿರಬೇಕು.

ಶಿಕ್ಷಣರಂಗ ಗುರುತರವಾದುದು. ಈ ರಂಗದಲ್ಲಿ ಶಿಕ್ಷಕನ ಪಾತ್ರ ಮಹತ್ತರವಾದುದು ಭವ್ಯ ಭಾರತದ ಬಾಗಿಲು ಬಲಯುತವಾಗುವುದು ಆದರ್ಶ ಶಿಕ್ಷಕರಿಂದ. ಅವನಿಂದು ಸುಂದರ ರಾಷ್ಟ್ರ ನಿರ್ಮಾಣ ಮಾಡಬೇಕಾಗಿದೆ. ಅವನ ಕರ್ತವ್ಯ, ಸೇವಾ ಭಾವನೆ, ತ್ಯಾಗಬುದ್ಧಿ, ಸಂಕಲ್ಪಶಕ್ತಿ, ಪರೋಪಕಾರ ಮತ್ತು ಆದರ್ಶ ಗುರುಗಳಿಂದಲೇ ಈ ಮಹಾಕಾರ್ಯವನ್ನು ಸಾಧಿಸಲಾದೀತು. ಆದ್ದರಿಂದ ಶಿಕ್ಷಕನು ಉತ್ತಮ ವಿಚಾರಗಳ ಧಾಳಿಯಿಂದ ಶಿಕ್ಷಣ ಕ್ಷೇತ್ರದಲ್ಲಿ ಕ್ರಾಂತಿಯನ್ನೆಬ್ಬಿಸಿ ಸಾಕ್ಷರತೆಯ ಪ್ರಸಾರಕ್ಕೆ ಆಧಾರ ಸ್ತಂಭವಾಗಿ ನಿಲ್ಲಬೇಕು. ಮನುಷ್ಯನಿಗೆ ಮನುಷ್ಯತ್ವವನ್ನು ದಯಪಾಲಿಸುವ ದಿವ್ಯ ಸಂಜೀವಿನಿಯಾಗಬೇಕು. ಮಕ್ಕಳಲ್ಲಿ ನ್ಯಾಯಾನ್ಯಾಯ, ಧರ್ಮಾಧರ್ಮ, ಸತ್ಯಾಸತ್ಯದ ಕಲ್ಪನೆ, ಸಾರಾಸಾರದ ವಿಚಾರ ತರಂಗಕ್ಕೆ ಶಿಕ್ಷಕ ಪೂರಕನಾಗಬೇಕು. ಇದಕ್ಕಾಗಿ ತ್ಯಾಗಮಯ ಜೀವಿಗಳಾಗಿ ದುಡಿಯಬೇಕು ಪ್ರತಿಯೊಬ್ಬರು ತಮ್ಮ ಕರ್ತವ್ಯವನ್ನು ಸುಖಪೂರ್ವಕವಾಗಿ ನಿರ್ವಹಿಸುವ ಕಲೆಯನ್ನು ಕರಗತ ಮಾಡಿಕೊಳ್ಳ

ಬೇಕು. ಈ ವೃತ್ತಿಯಲ್ಲಿ ಅಷ್ಟೇನು ಗೌರವ ಸಿಗದು ಎಂದು ಗೊಣಗುಟ್ಟುವವರೂ ಇರಬಹುದು. ಆದರೆ ತಾನು ಮಾಡುವ ನಿಸ್ವಾರ್ಥ ಮತ್ತು ನಿಷ್ಕಾಮ ಸೇವೆಯಿಂದ ಘನತೆ ಗೌರವವು ಲಭಿಸುವುದೇ ಹೊರತು ತಾನಿರುವ ಸ್ಥಾನಮಾನಗಳಿಂದಲ್ಲ, ಸೇನಾ ನಿರತರಿಗೆ ಕಿಂಕರತ್ವದಿಂದ ಶಂಕರತ್ವ ಪದವಿ ಖಂಡಿತಾ ದೊರೆಯುತ್ತದೆ. ಇದಕ್ಕೆ ಅನೇಕ ಪ್ರಶಸ್ತಿ ವಿಜೇತರಾದ ಶಿಕ್ಷಕರೇ ಸಾಕ್ಷಿ.

ಶಿಕ್ಷಕ ತನ್ನ ಜೀವನದ ಪ್ರತಿಯೊಂದು ಹಂತದಲ್ಲಿಯೂ ಧೈರ್ಯ ಸ್ಥೈರ್ಯ ದಿಂದಲೂ, ಶಾಂತಿ ಸಂಯಮದಿಂದಲೂ ವರ್ತಿಸುವುದನ್ನು ರೂಢಿಸಿಕೊಳ್ಳಬೇಕು. ಆತ್ಮಗೌರವ, ಆತ್ಮಜ್ಞಾನ, ಆತ್ಮಸಂಯಮ ಇವುಗಳನ್ನು ರೂಢಿಸಿಕೊಂಡು ಕ್ರಿಯಾ ಹಂತಿಕೆಯಿಂದ ಎಲ್ಲರ ಪ್ರೀತಿಗೆ ಪಾತ್ರನಾಗಬೇಕು.

ಜೀವನದಲ್ಲಿ ಅಷಾಢಭೂತಿತನ, ಡೋಂಗಿತನ, ಡಂಭಾಚಾರ ಮತ್ತು ಬೂಟಾಟಿಕೆಗಳಿಗೆ ಎಡೆಇಲ್ಲದಂತೆ ವರ್ತಿಸುವ ಧೀರತೆಯನ್ನು ದಿಟ್ಟತನದಿಂದ ಪಾಲಿಸುವವರಾಗಬೇಕು, ಮನಸ್ಸು ಡೋಲಾಯಮಾನವಾಗಿರದೆ ಎಂತಹ ಸತ್ವ ಪರೀಕ್ಷೆಗಾದರೂ ಸಿದ್ಧವಿರಬೇಕು. ಜೀವನದ ಬಾಳಿನಲ್ಲಿ ಸುಖ-ದುಃಖ, ಸಿಹಿ-ಕಹಿ, ಸೋಲು-ಗೆಲುವು, ಆಶೆ-ನಿರಾಸೆ, ಅನುಕೂಲ-ಪ್ರತಿಕೂಲ, ಸಾಧಕ-ಬಾಧಕ ಮುಂತಾದ ಏರಿಳಿತಗಳನ್ನು ಮೆಟ್ಟಿ, ಮೃತ್ಯುಂಜಯನಾಗಿ ನಿಲ್ಲಬೇಕು. ಇದೇ ಜೀವನದ ರಕ್ಷಾ ಕವಚವಾದೀತು. ಇದೇ ವಿಚಾರ ತರಂಗದಲ್ಲಿ ಮಕ್ಕಳನ್ನು ತಯಾರಿಸುವುದು ಶಿಕ್ಷಕನ ಗುರಿಯಾಗಬೇಕು, ಆ ಪ್ರತಿಜ್ಞೆಯಲ್ಲಿ ಪೂರ್ಣ ನಿಷ್ಠೆ ಇಡಬೇಕು. ಶಿಕ್ಷಕ ಮಕ್ಕಳ ಮನದಲ್ಲಿ ಅವರಲ್ಲಿ ಅಡಗಿದ ಅಂತಃಶಕ್ತಿ ಸಂಪತ್ತನ್ನು ಕಾವ್ಯಗಂಗೆಯಂತೆ ಓತಪ್ರೋತವಾಗಿ ಚೈತನ್ಯದ ಚಿಲುಮೆಯಂತೆ ಹೊರಹೊಮ್ಮಿಸಬೇಕು. ಸುಸಂಸ್ಕೃತ ಜನಕೋಟಿಯ ನಿರ್ಮಾಣ, ಆದರ್ಶ ಶಿಕ್ಷಕರಿಂದಲೇ ಸಾಧ್ಯ. ಇದಕ್ಕೆ ಪ್ರತ್ಯಕ್ಷ ನಿದರ್ಶನ; ಸಾಕ್ರಟೀಸ್, ವಿವೇಕಾನಂದ, ಕನ್‌ಫ್ಯೂಷಿಯಸ್ ಮತ್ತು ಅರಿಸ್ಟಾಟಲ್ ಜಗತ್ತಿನಲ್ಲಿ ಅಮರರಾಗಿದ್ದಾರೆ.

ಶಿಕ್ಷಕರೆಂದರೆ ಕೇವಲ ಕಲಿಸುವ ಉದ್ಯೋಗಕಷ್ಟೇ ಸೀಮಿತವೆಂದು ಭಾವಿಸಬಾರದು, ಮತ್ತು ತಮ್ಮ ತರಬೇತಿಯ ಅವಧಿಯಲ್ಲಿ ಕಲಿತಿರುವುದೇ ಸಾಕು, ಎಲ್ಲವನ್ನೂ ತಿಳಿದಿದ್ದೇವೆ, ಇನ್ನು ಮುಂದೆ ಓದುವುದೇ ಬೇಕಿಲ್ಲ ಎಂಬ ಸಂಕುಚಿತ ಭಾವನೆ ಶಿಕ್ಷಕನಿಗೆ ಎಂದೆಂದಿಗೂ ಸಲ್ಲದು. "The teacher who gets the best out of his students makes his home on annex to the University" ಎಂಬ ಲಾಸ್ಕಿನ ಹೇಳಿಕೆಯಂತೆ ನಾಡಿನ ಶಿಕ್ಷಕರು ನಾಡಿಗೆಲ್ಲ ಆ ಅನ್ಯತೋಕ್ತಿ ಸಂಚರಿಸಿದಾಗ ಭಾರತ ಸುವರ್ಣ ಭೂಮಿಯಾಗಿ ಪರಿವರ್ತನೆಯಾಗುವುದರಲ್ಲಿ ಸಂಶಯವಿಲ್ಲ.





# ಬಸವಣ್ಣನ ವಿಚಾರಗಳಲ್ಲಿ ಪ್ರಗತಿ–ಪರತೆ

—ವೀ. ಶಿ. ಸ್ವಾಮಿ
ಖಟಕ ಚಿಂಚೋಳಿ (ಬೀದರ)

ಸಾವಿರಾರು ವರ್ಷಗಳವರೆಗೆ 'ಪರಮಸತ್ಯ'ದ ಹಲೆಪಟ್ಟಿ ಅಂಟಿಸಿಕೊಂಡು ಆಚಂದ್ರಾರ್ಕ ಭವಿಷ್ಯದ ಕನಸು ಕಾಣುತ್ತ ಬಂದಿದ್ದ ಭಾರತೀಯ 'ಸನಾತನ ಸಿದ್ಧಾಂತ'ದ ಮೌಲ್ಯಗಳು ಆರ್ಥಿಕ ಸಿದ್ಧಾಂತಗಳಲ್ಲಾದ ಕ್ರಾಂತಿಕಾರೀ ಬದಲಾವಣೆಗಳಿಂದಲೂ, ವಿಜ್ಞಾನದ ವಿಸ್ಮಯಕರ ಬೆಳವಣಿಗೆ ಹಾಗೂ ಅದು ಕಂಡುಹಿಡಿದ 'ತೆಪ್ಪಗೆ ಒಪ್ಪಿಕೊಳ್ಳಬಹುದಾದ' ಸತ್ಯಗಳಿಂದಲೂ ತಮ್ಮ 'ಪರಮಸತ್ಯ'ದ ಪಟ್ಟವನ್ನು ಎಂದೋ ಬಿಟ್ಟುಕೊಟ್ಟಿವೆ. ಆ 'ಪರಮಸತ್ಯ' ಗಳನ್ನು ಕಂಡುಹಿಡಿದ ದ್ರಷ್ಟಾರರೂ ಇಂದಿನ ಪ್ರಗತಿಪರ ವಿಚಾರಧಾರೆಯ ಒರೆಗಲ್ಲಿನ ಕಟುಪರೀಕ್ಷೆಗೆ ಒಳಗಾಗಿ ಅವರೂ ಒಬ್ಬೊಬ್ಬರಾಗಿ ಕೆಳಗಿಳಿದು ಹೋಗುತ್ತಿದ್ದಾರೆ. ಈ ವೈಚಾರಿಕತೆಯ ಒರೆಗಲ್ಲಿನ ಪರೀಕ್ಷೆಯಲ್ಲೂ ಉತ್ತೀರ್ಣನಾಗಿ ತನ್ನ ಜನಪ್ರಿಯತೆಯನ್ನು ಮತ್ತಷ್ಟು ಅಚ್ಚಹಸುರಾಗಿ ಉಳಿಸಿಕೊಳ್ಳುವವರಲ್ಲಿ ಬಸವಣ್ಣನೂ ಒಬ್ಬ, ಒಬ್ಬನೇ ಎಂದರೂ ಅಡ್ಡಿಯಿಲ್ಲ.

ವೈಚಾರಿಕ ಪ್ರಗತಿಪರತೆ ಬಸವಣ್ಣನ ಸಹಜ ಗುಣ. ಈ ಗುಣವೇ ಒಬ್ಬ ವ್ಯಕ್ತಿಯ ಸಾರ್ವಕಾಲಿಕ ಜನಪ್ರಿಯತೆಯ ತಳಹದಿ. ಬಸವಣ್ಣ ಮೊದಮೊದಲಿಗೆ 'ಅತೀ' ಎನ್ನುವಷ್ಟು ಸಂಪ್ರದಾಯಸ್ಥ, ಭಾವೋದ್ರೇಕ, ಪಕ್ಕಾ ಶೈವಪಕ್ಷಪಾತಿ. ಮೊದಲು ಹೀಗಿದ್ದ ಬಸವಣ್ಣನೇ ಮುಂದೆ ಬರಬರುತ್ತ ಬದುಕಿಗೆ ತಕ್ಕಂಥ ವಿಚಾರಧಾರೆಯನ್ನು ಅಳವಡಿಸಿಕೊಳ್ಳುತ್ತ ಪ್ರಗತಿಶೀಲನಾಗಿ ಪರಿವರ್ತನೆ ಹೊಂದುತ್ತಾನೆ. ಬಸವಣ್ಣನ ಮೇಲ್ಮೆ ಇರುವದು ಇಲ್ಲಿಯೇ. ಆತ ಅನುಭಾವವನ್ನು ಅರಗಿಸಿಕೊಳ್ಳುತ್ತ ಬದುಕಿಗೆ ಹೊಂದಿಸಿಕೊಂಡು ಬಂದನೇ ವಿನಃ, ಆಗಲೇ ಜಾರಿಯಲ್ಲಿದ್ದ 'ವ್ಯವಸ್ಥೆ'ಗೆ ಬದುಕನ್ನು ಒಗ್ಗಿಸಿಕೊಳ್ಳಲಿಲ್ಲ; ಬಲಿಕೊಡಲಿಲ್ಲ.

ಮೊದಮೊದಲಿಗೆ ಅನುಭವ ಇನ್ನೂ ಹಸಿಯಾಗಿಯೇ ಇದ್ದಾಗ ಅವನ ಉತ್ಸಾಹ ಅಪರಿಮಿತ. ಆ ಅವಸ್ಥೆಯಲ್ಲಿ ತಾನು ಅದೇ ಹೊಸದಾಗಿ ಸ್ವೀಕರಿಸಿದ 'ಧಾರ್ಮಿಕ ಆಚರಣೆ'ಗಳನ್ನು ಬಳಕೆಗೆ ತರಲು ಅವನಲ್ಲಿ ಇದ್ದ 'ಹುರುಪು' ಹೊಸ ಕಂಪನಿಯವರು ತಮ್ಮ ಸರಕನ್ನು ಬೇಕಾಬಿಟ್ಟಿಯಾಗಿ ಹಂಚುವಷ್ಟು. 'ಕೊಲ್ಲೆನಯ್ಯಾ ಪ್ರಾಣಿಗಳ, ಮೆಲ್ಲೆನಯ್ಯಾ ಬಾಯಿಚ್ಛೆಗೆ....' ಎಂದು ಹೇಳುತ್ತಿದ್ದ ತಾನೇ ಸರಸರನೇ ಲಿಂಗಧಾರಣೆ ಮಾಡುವ ಉತ್ಸಾಹದಲ್ಲಿ "ಎಡದ ಕೈಯಲಿ ಕತ್ತಿ, ಬಲದ ಕೈಯಲಿ

ಮಾಂಸ, ಬಾಯಲ್ಲಿ ಸುರೆಯ ಗಡಿಗೆ ಕೊರಳಲ್ಲಿ ದೇವರು (ಲಿಂಗ) ಇರಲಿ, ಅವರ ಲಿಂಗವೆಂಬೆ, ಸಂಗನೆಂಬೆ, ಕೂಡಲ ಸಂಗಮ ದೇವಾ, ಅವರ ಮುಖ ಲಿಂಗಿಗಳೆಂಬೆ (ಬ.ಷ.ವ. ೭೧೯)" ಎನ್ನುತ್ತಾನೆ. ಮಾಂಸಾಹಾರ, ಸುರಾಪಾನ ಇವತ್ತಿಗೂ ಲಿಂಗಾಯತರಲ್ಲಿ ವರ್ಜ್ಯ. ಆದರೆ, ಇಂಥ ಪಂಥವನ್ನು ಕಟ್ಟುವ ಹೊಸದರಲ್ಲಿಯೇ ಬಸವಣ್ಣ ಇಂಥ ಯಾವ ಕಟ್ಟುಪಾಡಿಗೂ ಒಳಗಾಗಿರಲಿಲ್ಲ. ಆಗ ಅವನಿಗೆ ಬೇಕಾದದ್ದು ಬರೀ ಲಿಂಗಪ್ರಚಾರ. ಸರ್ವಂ ಲಿಂಗಮಯಂ ಜಗತ್ತನ್ನಾಗಿ ಪರಿವರ್ತಿಸುವದು. ಕಟ್ಟಿಕೊಳ್ಳುವವರ ಆಚಾರ-ವಿಚಾರ ಯಾವುದರೆಡೆಗೂ ಆತನ ಲಕ್ಷ್ಯವಿಲ್ಲ. 'ಲಾಂಛನವ ಕಂಡು ನಂಬುವೆ; ಅವರಂತರಂಗವ ನೀವೇ ಬಲ್ಲಿರಿ' (ಬ.ಷ ವ. ೪೦೧) ಎನ್ನುವಷ್ಟು ಅವರ ಆಚಾರ-ವಿಚಾರಗಳ ಬಗೆಗೆ ಅಲಕ್ಷ್ಯ. 'ಆರಾರ ಮನದಲ್ಲಿ ಏನೇನಿಹುದೆಂದರಿಯೆ: ಬಳ್ಳಿಹರೆಂದೆನಲಮ್ಮೆ, ಹೊಲ್ಲಹರೆಂದೆನಲಮ್ಮೆ' ಎನ್ನುವಷ್ಟು ಅಂಜಿಕೆ" ಶಿವಭಕ್ತರಾದ ಕಾರಣ ಜಂಗಮವೇ ಲಿಂಗ ಕೂಡಲ ಸಂಗಮದೇವ (ಬ.ಷ.ವ ೪೦೨)

ಸ್ವತಃ ಬ್ರಾಹ್ಮಣನಾಗಿ ಜನಿಸಿದ ಬಸವಣ್ಣನಿಗೆ ಅಹಿಂಸೆಯಂತೂ ರಕ್ತಗತವಾಗಿಯೇ ಬಂದಿತ್ತು. ಈ ಹಿನ್ನೆಲೆಯಿಂದಲೊ, ಅಥವಾ ಆಗಲೇ ಪ್ರಚಲಿತವಿದ್ದ ಜೈನ, ಬೌದ್ಧ ಧರ್ಮಗಳ ಪ್ರಬಲ ಅಹಿಂಸೆಯ ಪರಿಣಾಮದಿಂದಲೋ, ಅಥವಾ ತಾನೇ ತನ್ನ ಕಣ್ಣಾರೆ ಹೋತನ ಬಲಿಯೊಂದನ್ನು ಕಂಡಮೇಲೋ, ಆತನ ಹೃದಯವೂ ಕರಗಿ ನೀರಾಗಿ ಹರಿಯಿತು. ಆ ಹೋತನ ಬಲಿಯನ್ನು ತಪ್ಪಿಸಲಿಕ್ಕಾಗದ ತನ್ನ ಅಸಹಾಯಕ ಸ್ಥಿತಿಯಲ್ಲಿಯೇ "ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು ಎಲೆ ಹೋತೇ ಅಳು ಕಂಡಾ, ವೇದವನೋದಿದವರ ಮುಂದೆ ಅಳು ಕಂಡಾ, ಶಾಸ್ತ್ರವ ಕೇಳಿದವರ ಮುಂದೆ ಅಳು ಕಂಡಾ, ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲ ಸಂಗಮದೇವ" (ಬ.ಷ.ವ. ೫೭೨) ಎಂದು ವೈತುಂಬ ಕಣ್ಣೀರು ಹರಿಸಿ ಅತ್ತುಬಿಟ್ಟ. ಬಹುಶಃ ಬಸವಣ್ಣ ಆಗಿನ್ನೂ ಅಷ್ಟು ಪ್ರಬಲನಾಗಿ ಬೆಳೆದಿರಲಿಕ್ಕಿಲ್ಲ. ಆದರೂ ವ್ಯಥೆಯ ಮೂಲಕವಾದರೂ ತನ್ನ ಪ್ರತಿಭಟನೆಯನ್ನು ವ್ಯಕ್ತಪಡಿಸಿದ. ಆಗಲೇ ಅವನ ವಿಚಾರಧಾರೆಯಲ್ಲಿ ಹೊಸ ವಿಚಾರದ ಚಿಕ್ಕ ತೊರೆಯೊಂದು ಬಂದು ಸೇರಿತು. ಕೊರಳಲ್ಲಿ ಲಿಂಗವಿದ್ದರೆ ಸಾಕು....ಬಲದ ಕೈಯಲ್ಲಿ ಮಾಂಸ, ಬಾಯಲ್ಲಿ ಸುರೆಯ ಗಡಿಗೆಯನ್ನು ಹಿಡಿದಿದ್ದರೂ ಅವರನ್ನು ಸಂಗಮನಾಥನೆಂದು ನಂಬುವ ಬಸವಣ್ಣ ಬದಲಾಗಿ ಹೋದ. 'ಲಿಂಗದಿಚ್ಛೆಗೆ ಮದ್ಯ-ಮಾಂಸ'ವ ತಿಂಬರು; ಕಂಗಳಿಚ್ಛೆಗೆ ಪರವಧುವ ನೆರೆವರು; ಲಿಂಗಲಾಂಛನಧಾರಿಯಾದಲ್ಲಿ ಫಲವೇನು, ಲಿಂಗಪಥವ ತಪ್ಪಿನಡೆವರು? (ಬ ಷ.ವ. ೧೦೬) ಎಂದು ತಿದ್ದಿಕೊಂಡ. ಮೊದಲು ಯಾವುದರತ್ತ ಆತ ಅಲಕ್ಷ್ಯ ಮಾಡಿದ್ದನೋ ಈಗ ಅದೇ 'ಲಿಂಗಪಥ'ವಾಯಿತು. ಯಾವುದರ ಧಾರಣೆಯಿಂದ ಅದರ ಅಸಹ್ಯ ಗುಣಗಳೆಲ್ಲ ಕಾಣದಂತಾಗಿ ಸಂಗಮನಾಥನ ದರ್ಶನವಾದಂತೆ ಭಾವಿಸುತ್ತಿದ್ದನೋ, ಈಗ ಅದೇ ಲಿಂಗಧಾರಣೆಗೆ ಅವೇ ಮದ್ಯ-ಮಾಂಸಾದಿಗಳು ಅಡ್ಡಿಯಾಗತೊಡಗಿದವು. ಹಾಗೆಯೇ



ಲಿಂಗಧಾರಕರಲ್ಲೂ ಬರೀ ಲಾಂಛನವ ಕಂಡು ನಂಬಿಬಿಡುತ್ತಿದ್ದವ, ಬಳಿಕ 'ಲಾಂಛನಕ್ಕೆ ಶರಣೆಂಬೆ! ಲಾಂಛನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೆ, ಕೂಡಲ ಸಂಗಮದೇವಾ, ನೀ ಸಾಕ್ಷಿಯಾಗಿ 'ಛೀ' ಎಂಬೆನು (ಬ.ಷ ವ. ೭೫೨) ಎಂದು ಲಿಂಗವಿದ್ದರೂ ಆಚರಣೆಯಿಲ್ಲದಿದ್ದಡೆ ಅವರ ಕೊರಳ ಲಿಂಗವನ್ನೇ ಸಾಕ್ಷಿಯಾಗಿಟ್ಟುಕೊಂಡು 'ಛೀ' ಎನ್ನತೊಡಗಿದ. ಸದ್ಭಕ್ತಿ-ಸದಾಚಾರವಿಲ್ಲದವರ ಆರಾಧನೆ ದಂಡವೆಂದೆನ್ನಿಸತೊಡಗಿತು. ಈಗ ಇವರು ಬಸವಣ್ಣನ ದೃಷ್ಟಿಯಲ್ಲಿ ಭೂಭಾರಕರು! [ಬ.ಷ.ವ. ೭೫೦]

ಮರ್ತ್ಯ ಲೋಕವನ್ನೇ ಮಹಾ ಮನೆಯನ್ನಾಗಿಸುವ ಗುರಿ ಹೊಂದಿದ್ದ ಬಸವಣ್ಣ ಅದಕ್ಕಾಗಿ ಅಹರ್ನಿಶಿ ಪ್ರಯತ್ನ ಪಡುತ್ತಿದ್ದ. ಜನತೆಯನ್ನು ಸರಿದಾರಿಗೆ ತರಲು ಭಾರತೀಯರು ಕಂಡುಹಿಡಿದ ಒಂದು ಅಗ್ಗದ ಹಾದಿಯೆಂದರೆ ದೇವರ ಸರ್ವಾಂತರ್ಯಾಮಿತ್ವ. ಎಲ್ಲೆಡೆಯಲ್ಲಿಯೂ ವ್ಯಾಪಿಸಿರುವ ದೇವರು ತಾವು ಎಷ್ಟೇ ಕದ್ದು, ಮುಚ್ಚಿ ಏನನ್ನೇ ಮಾಡಿದರೂ ಅವನು ಕಂಡುಬಿಡುತ್ತಾನೆ ಸತ್ತ ಬಳಿಕ ಶಿಕ್ಷೆ ಕೊಡುತ್ತಾನೆ-ಎಂಬ ಭಾವನೆಯನ್ನು ಎಲ್ಲರ ಎದೆಯಲ್ಲಿ ಬಿತ್ತಿ ತನ್ಮೂಲಕ ಜನತೆಯನ್ನು ಸದಾಚಾರದಲ್ಲಿರಿಸುವ ಈ ಸುಲಭೋಪಾಯಕ್ಕೆ ಎಲ್ಲರೂ ಶರಣು ಹೋಗಿದ್ದಾರೆ. ಆದರೂ ಹೇಗೋ ಹೇಗೋ ಸ್ಥಾನಿಕ ಕ್ಷೇತ್ರಗಳು ಹುಟ್ಟಿ-ಬೆಳೆದು ಸರ್ವಾಂತರ್ಯಾಮಿ ದೇವನಿಗಿಂತ ಈ ಸ್ಥಾನಿಕ ದೇವರ ಪ್ರಭಾವವೇ ಮಿತಿಮೀರಿ ಬೆಳೆದಾಗ, ಜನತೆಗೂ ತಮ್ಮ ಪಾಪಗಳ ನಿವಾರಣೆಗೆ [ಹಾಗೂ ಹೊಸ ಪಾಪಗಳನ್ನು ಪ್ರಾರಂಭಿಸುವದಕ್ಕೆ] ಒಂದು ಒಳಹಾದಿ ದೊರೆತಂತಾಯಿತು. ಇದರಿಂದ ಹೊಸ ಹೊಸ ದುಷ್ಕೃತ್ಯಗಳನ್ನು ಮಾಡುವದಕ್ಕೆ ಮತ್ತಷ್ಟು ಚಾಲನೆ ಸಿಕ್ಕಿದಂತಾಗಿ ಎಲ್ಲೆಡೆಗೂ ದುರಾಚಾರವೇ ತಾಂಡವವಾಡತೊಡಗಿದಾಗ, ಬಸವಣ್ಣ 'ಅಂತರಂಗದ ನಿರಾಕಾರ ಲಿಂಗ'ತ್ವವನ್ನು ಪ್ರತಿಪಾದಿಸಿ ಅದರ ಕುರುಹಾಗಿ ಅಂಗದ ಮೇಲೂ ಒಂದು ಲಿಂಗಧಾರಣೆಯ ಪದ್ಧತಿಯನ್ನು ಜಾರಿಗೆ ತಂದ. ಮಹಾ ಭಾರತದ ಗೀತೋಪದೇಶದಲ್ಲಿ 'ಈಶ್ವರಸ್ಸರ್ವದೇವಾನಾಂ ಹೃದ್ದೇಶೇರ್ಜುನ ತಿಷ್ಠತಿ' ಎಂದು ಅಂತರಂಗದಲ್ಲಿಯೇ ದೇವನ ಅಸ್ತಿತ್ವವನ್ನು ಪ್ರತಿಪಾದಿಸಲಾಗಿದ್ದರೂ, ಅದನ್ನು ಕುರುಹಿನ ರೂಪದಲ್ಲಿ ಹೊರಗೆ ತರುವ ಪ್ರಯತ್ನ ಮಾಡಿರಲಿಲ್ಲ.

ಬಸವಣ್ಣ ಜಾರಿಗೆ ತಂದ ಲಿಂಗಧಾರಣೆ ಹಾಗೂ ಲಿಂಗಾರ್ಚನೆಯ ವಿಧಾನದ ಆಸರೆಯನ್ನ ಅವಲಂಬಿಸಿ, ಅವನ ಕಣ್ಣೆದುರಿನಲ್ಲಿಯೇ ಮೋಸವಂಚನೆಗಳು ಸುರುವಾದವು. ಇದರ ವಿರುದ್ಧ ಫಲವನ್ನು ನಿರೀಕ್ಷಿಸಿದ್ದ ಬಸವಣ್ಣನಿಗೆ ಇದರಿಂದ ತುಂಬ ವ್ಯಥೆಯಾಯಿತು. ಕುಳ್ಳಿರ್ದಲ್ಲಿ ಲಿಂಗವ ಪೂಜಿಸಿ ಅಲ್ಲ ದಾಟವನಾಡುವರಯ್ಯ, ಬೆಳ್ಳಿತ್ತಿನ ಮರೆಯಲಿದ್ದು ಹುಲ್ಲೆಗೆಂಬ ತೊಡುವಂತೆ" [ಬ.ಷ ವ ೭೪೪] ಎಂದು ಮಮ್ಮಲ ಮರುಗಿದ. "ಕಳ್ಳ ಹಾದರಿಗರ ಕೈಯಲು ಪೂಜೆಯ ಕೊಳ್ಳ ನಮ್ಮ

ಕೂಡಲ ಸಂಗಮದೇವಾ" ಎಂದು ಎಚ್ಚರಿಸಿದ. ಅದರೇನು ಪ್ರಯೋಜನ? ತೋರಿ ಮೀವ ಅಣ್ಣಗಳೂ, ತೋರಿ ಮೀವ ಸ್ವಾಮಿಗಳೂ ಎಲ್ಲರದೂ ಇದೇ ಹಾಡು. ನೂರ ನೋದಿ ನೂರ ಕೇಳುತ್ತಿದ್ದರೂ ಆಶೆ ಹರಿದಿರಲಿಲ್ಲ ರೋಷ ಬಿಡುತ್ತಿರಲಿಲ್ಲ, ಎಲ್ಲರೂ ಮಾಶಿನಂತೆ ಮನವಿಲ್ಲದ ಜಾತಿ ಡೊಂಬರೇ, ಹೊರಗೆ ವಿನಯವಾಗಿ ಒಳಗೆ ಕುಟಿಲವಾಗಿ ಭಕ್ತರೆನಿಸಿಕೊಂಬುವವರೇ. ಇಂಥವರಿಗೆಲ್ಲ ಬೇಕಾದಷ್ಟು ಉಪದೇಶಿಸಿದ ಬೇಕಾದಂತೆ ಬೋಧಿಸಿದ. ಕಬ್ಬುನದ ಕೋಡಗವ ಪರುಷ ಮುಟ್ಟಲು ಹೊನ್ನಾದಡೇನು, ಮತ್ತೇನಾದಡೇನು, ತನ್ನ ಮುನ್ನಿನರೂಹ ಬಿಡದನ್ನಕ್ಕ? ಕೂಡಲ ಸಂಗಮ ದೇವಾ ನಿಮ್ಮ ನಂಬಿಯೂ ನಂಬದ ಡಂಭಕರಿಗಯ್ಯ [ಬ ಷ ವ.-೯೫] ಎಂದೆನ್ನಬೇಕಾದರೆ ಬಸವಣ್ಣನಿಗೆಷ್ಟು ಹತಾಶೆಯಾಗಿರಬೇಡ?

ತಾನು ಕಟ್ಟಿದ ಲಿಂಗದ ಭಯ ಹುಟ್ಟಿಸಿ ಈ ಡಂಭಕರನ್ನು ದಾರಿಗೆ ತರಲು ಶಕ್ತಿ ಮೀರಿ ಯತ್ನಿಸಿದ. ಬಸವಣ್ಣ ಅಪ್ಪಟ ಆಶಾವಾದಿ, ಒಮ್ಮೆಲೇ ನಿರಾಶೆಯ ಹೊಂಡದಲ್ಲಿ ಹಾರಿಕೊಳ್ಳುವವನಲ್ಲ. ಲಿಂಗದ ಮಾಧ್ಯಮದಿಂದ ಜನತೆಯನ್ನು ತಿದ್ದಬಹುದೆಂಬ ಆಶೆಯಿರಿಸಿಕೊಂಡು "ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ ಹಿಡಿದಿರ್ದ ಲಿಂಗವೇ ಘಟಸರ್ಪನಯ್ಯಾ. ನುಡಿಯಲು ಬಾರದು, ನಡೆಯಲು ಬಾರದು, ಲಿಂಗದೇವನೇ ದಿಬ್ಯವೋ ಅಯ್ಯಾ– [ಬ ಷ ವ. ೬೯೫]" ಎಂದು ಎಚ್ಚರಿಸಿದ. "ಮಜ್ಜನಕ್ಕೆರೆವುದು ಲಿಂಗ. ಅದು ಲಿಂಗಕರಸ್ಥಲದ ದಿಬ್ಯ" ಎಂದು ಒತ್ತಿ ಒತ್ತಿ ಹೇಳಿದ. ಅವರು ಪೂಜಿಸುವ ಲಿಂಗ 'ಗುರುವಚನ ಭಾಷಾಪತ್ರ' ಎಂದು ಮನದಟ್ಟು ಮಾಡಿಕೊಡಲೆತ್ನಿಸಿದ. ಈ ಲಿಂಗ 'ಸತ್ಯದಿಂದ ನಡೆವಂಗೆ ನಿತ್ಯ ನೇಮವಾಗಿ ಸಲಿಸುವನಲ್ಲದೆ ಹುಸಿವಂಗೆ ಮುಡಿಲ ಕಿಚ್ಚಾಗಿ ಸುಡುವ' ಎಂದು ಭಯಬಿತ್ತಿದ. ಆದರೂ ಪರಿಣಾಮ ಮಾತ್ರ 'ಶೂನ್ಯ ಸಂಪಾದನೆ'.

ಈ ಅನುಭವ ಬಸವಣ್ಣನ ವೈಚಾರಿಕ ಒಳಗಣ್ಣನ್ನು ತೆರೆಯಿಸಿತು. 'ಸುಕ್ಷೇತ್ರ'ಗಳ ಸುತ್ತ ಬೆಳೆದಿದ್ದ ಅನಾಚಾರ–ಅಂಧಾಚಾರಗಳೇ 'ಲಿಂಗ'ದ ಸುತ್ತಲೂ ಬೆಳೆದಾಗ ಬಸವಣ್ಣನಿಗೂ ಅದುವರೆಗೆ 'ಲಿಂಗ'ದ ಶಕ್ತಿಯ ಬಗೆಗೆ ಇದ್ದ ಭ್ರಮೆ ನಿರಸನವಾದಂತೆ ತೋರುತ್ತದೆ. ಅಲ್ಲಿಯತನಕ 'ಲಿಂಗವಿಲ್ಲದೆ ನಡೆವವರ, ಲಿಂಗವಿಲ್ಲದೆ ನುಡಿವವರ, ಲಿಂಗವಿಲ್ಲದೆ ಉಗುಳು ನುಂಗಿದಡೆ ಅಂದಂದಿಗೆ ಕಲ್ಪಿಷವಯ್ಯಾ. ಏನೆಂಬೆನೇನೆಂಬೆನಯ್ಯಾ, ಲಿಂಗವಿಲ್ಲದೆ ನಡೆವವರ ಅಂಗ ಲೌಕಿಕ: ಮುಟ್ಟಲಾಗದು. ಲಿಂಗವಿಲ್ಲದೆ ನುಡಿವವರ ಶಬ್ದ ಸೂತಕ: ಕೇಳಲಾಗದು. ಲಿಂಗವಿಲ್ಲದೆ ಗಮಸಿದಡೆ ಆ ನಡೆ ನುಡಿಗೊಮ್ಮೆ ವ್ರತಗೇಡಿ, ಕೂಡಲ ಸಂಗಮದೇವಾ! [ಬ.ಷ ವ. ೬೦೦] ಎಂದು ಲಿಂಗಕ್ಕೇ ಹೆಚ್ಚು ಒತ್ತು ಕೊಟ್ಟವ 'ಈ ಲಿಂಗದ ಬಲ'ವನ್ನು ಕಂಡು ತನ್ನ ವಿಚಾರವನ್ನು ಮತ್ತೇ ತಿದ್ದಿಕೊಂಡ. 'ಲಿಂಗವಿರದೆ ಸೀಮೆಯ ಕಲ್ಲೆನಲ್ಲಿ? ಲಿಂಗವಿರದೆ ಪಶುವಿನ ತೊಡೆ



ಯಲ್ಲಿ? ಕಲ್ಲ ತೆಕ್ಕೊಂಡು ಮಳೆಯ ಮೇಲೆ ಇಟ್ಟಡೆ, ಆ ಕಲ್ಲು ಮಳೆಯಲ್ಲಿ ಸಿಕ್ಕಿದಡೆ ಆ ಮಳೆ ಭಕ್ತನಾಗಬಲ್ಲುದೆ? ಇದು ಕಾರಣ ಸತ್ಯ, ಸಹಜ, ಸದ್ಭಾವ, ಸದ್ವರ್ತನೆ ಉಳ್ಳಡೆ ಸದ್ಭಕ್ತ. ಇಲ್ಲದಿದ್ದಡೆ ಆ ಮೆಳೆಯೊಳಗೆ ಸಿಕ್ಕಿದ ಕಲ್ಲಿನಂತೆ ಕಾಣಾ ಕೂಡಲ ಸಂಗಮದೇವಾ [ಬ.ಷ.ವ. ೧೦೩೭] ಎಂದು ಬದಲಾಯಿಸಿಕೊಂಡ. ಎಂತಹನಾದರೇನು ಲಿಂಗ ಮುಟ್ಟಿದವನೇ ಕುಲಜಾತಿ [ಬ.ಷ.ವ. ೧೪೨], ಲಿಂಗದೇವನಿಲ್ಲದ ಠಾವು ನರವಿಂಧ್ಯ ಹೋಗಲಾಗದು [ಬ.ಷ.ವ. ೮೭] ಎನ್ನುತ್ತಿದ್ದ ಬಸವಣ್ಣ, ಷಡುಸ್ಥಲದ ಪ್ರಥಮ ಸ್ಥಲವಾದ ಭಕ್ತಸ್ಥಲ ಪ್ರಾಪ್ತವಾಗುವದೇ ಲಿಂಗದಿಂದ ಎನ್ನುತ್ತಿದ್ದ ಬಸವಣ್ಣ 'ಆ ಕಲ್ಲು, [ಲಿಂಗ] ಮಳೆ [ವ್ಯಕ್ತಿ] ಯಲ್ಲಿ ಸಿಕ್ಕಿದಡೆ ಆ ಮಳೆ ಭಕ್ತನಾಗಬಲ್ಲುದೆ?' ಎನ್ನುವ ಹಂತಕ್ಕೇರಿದ್ದು ಆತನ ವೈಚಾರಿಕ ಪ್ರಗತಿಯ ಪರಾಕಾಷ್ಠೆ. ಬಸವಣ್ಣನ ವಿಚಾರಧಾರೆ ನಿಂತು ಮಲೆತುಹೋದ ಮುಗ್ಗಲು ನೀರಲ್ಲ; ಅದು ಸದಾ ಮುಂದುವರಿದು ಹರಿಯುತ್ತಲೇ ಇರುವ ಸ್ವೇಚ್ಛಾ ಝರಿಯೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಸದ್ಭಕ್ತನ ಲಕ್ಷಣವನ್ನು ಗುರುತಿಸುವ ಲಿಂಗದ ಮಾನದಂಡ ತನ್ನ ಬೆಲೆ ಕಳೆದುಕೊಂಡೊಡನೆ ಬಸವಣ್ಣನ ಮುಖ ವೈಯಕ್ತಿಕ ಜೀವನ ಪರಿಶುದ್ಧಿ ಹಾಗೂ ಸಾಮಾಜಿಕ ಪ್ರಗತಿ-ಸೇವೆಯತ್ತ ಹೊರಳಿದುದನ್ನು ಇದೇ ವಚನದಲ್ಲಿಯೇ ಗುರುತಿಸಬಹುದು. ವ್ಯಕ್ತಿ ಸದ್ಭಕ್ತನೆನಿಸಿಕೊಳ್ಳಬೇಕಾದರೆ, ಈಗ ಸತ್ಯ ಸಹಜ, ಸದ್ಭಾವ, ಸದ್ವರ್ತನೆಗಳನ್ನು ಅಳವಡಿಸಿಕೊಳ್ಳಬೇಕಾದುದು ಅಗತ್ಯವಾಯಿತು. ಲೆಸೇನಿಸಿಕೊಂಡು ಒಂದು ದಿನ ಬದುಕಿದರೂ ಸಾಕು (ಬಸವ ೧೫೪) ಎನ್ನುವಂತಾಯಿತು. ಲಿಂಗಕ್ಕಾಗಿ ಹಂಬಲಿಸುತ್ತಿದ್ದ ಮನ ಸಟೆಯಿಲ್ಲದ, ಪ್ರಪಂಚವಿಲ್ಲದ, ವೈಶಿಕವಿಲ್ಲದ ಬದುಕಿಗಾಗಿ ಹಂಬಲಿಸತೊಡಗಿತು. ಇದು ಸಮಗ್ರ ಜೀವನವನ್ನೇ ಪರಿಶುದ್ಧಿಗೊಳಿಸುಕೊಳ್ಳುವ ಪರಿ. ಮೊದಲು ಬರೀ ಲಿಂಗಧಾರಕರ ಲೇಸು ಬಯಸುತ್ತಿದ್ದ ಬಸವಣ್ಣನ ದೃಷ್ಟಿಯ ಕ್ಷಿತಿಜ ಈಗ ಸಕಲ ಜೀವಾತ್ಮರಿಗೆ ಲೇಸು ಬಯಸುವಷ್ಟು ಹಿಗ್ಗಿಕೊಂಡಿತು. ಎರೆದರೆ, ನೆನೆಯದ, ಮರೆದರೆ ಬಾಡದ ಲಿಂಗಾರ್ಚನೆಯಲ್ಲಿ ಯಾವ ಹುರುಳೂ ಕಾಣಿಸದಾಯಿತು. ಜಂಗಮಕ್ಕೆರೆಯುವದೇ ಲಿಂಗಕ್ಕೆರೆದಂತೆ- (ಬಸವ-೧೯೭) ಎಂಬ ತತ್ತ್ವ ಗೋಚರವಾಯಿತು. ತಾನೊಬ್ಬನೇ ಭಕ್ತನಾಗಿ, ಉಳಿದವರೆಲ್ಲ (ವ್ಯಕ್ತಿ ಸಮೂಹ) ಲಿಂಗ, ಜಂಗಮವಾಗಿ (ಬಸವ-೮೭೩) ಕಾಣತೊಡಗಿದರು. ಸಮಗ್ರ ಸಮಾಜ ಕಣ್ಣೆದುರು ನಿಂತಾಗ, ಸರ್ವ ಸಮ್ಮತ ಸೂತ್ರದ ಸಂಶೋಧನೆಯಲ್ಲಿ ತೊಡಗಿ, ಕೊನೆಗೆ ಕಳಬೇಡ, ಕೊಲಬೇಡ, ಹುಸಿಯನು ನುಡಿಯಲು ಬೇಡ ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಇದೇ ಅಂತರಂಗಶುದ್ಧಿ. ಇದೇ ನಮ್ಮ ಕೂಡಲ ಸಂಗಮ ದೇವರನೊಲಿಸುವ ಪರಿ (ಬಸವ-೨೩೫) ಎಂಬ ನಿಲವಿಗೆ ಬಂದು ತಲುಪಿದ

ಲಿಂಗಸಾರಾಯ ಸಜ್ಜನರಲ್ಲದವರ ಕೂಡಲಸಂಗಮದೇವನೆಂತೊಲಿವನು? (ಬಸವ ೧೨೦) ಎಂದು ನುಡಿದಿದ್ದ ಬಸವಣ್ಣನೇ ಧಾರಣೆ, ದೀಕ್ಷೆ, ಸಂಸ್ಕಾರ, ಮಂತ್ರ, ಉಪದೇಶ ಇಂಥ ಯಾವ ಗೊಂದಲವೂ ಇಲ್ಲದ, ಅಷ್ಟಾವರಣಗಳ ಕಷ್ಟವಿಲ್ಲದ, ಪಂಚಾಚಾರಗಳ ಪಡಿಪಾಟಲಿಲ್ಲದ, ಷಟ್ಸ್ಥಲದ ಸುದ್ದಿಯೂ ಇಲ್ಲದ ಸುಲಭ ಸೂತ್ರವನ್ನು ನೀಡಿದ. ಜಗಜ್ಯೋತಿಯಾದ.

ಇದೇ ಧೋರಣೆಯನ್ನು ಅವನ ಇತರ ವಿಚಾರಗಳಲ್ಲೂ ಕಾಣಬಹುದು. ಬಸವಣ್ಣ ಅಜ್ಜ ನೆಟ್ಟ ಆಲದ ಗಿಡಕ್ಕಾಗಲೀ ಅಥವಾ ತಾನೇ ಬೆಳೆಸಿದ ಬನ್ನಿಯ ಗಿಡಕ್ಕಾಗಲೀ, ನೇಣು ಹಾಕಿ ಕೊಳ್ಳುವನಲ್ಲ. ಸನಾತನ ಸಂಪ್ರದಾಯಗಳಲ್ಲಿದ್ದ ಮೌಢ್ಯದ ಬಗೆಗೆ ಆತನೆಷ್ಟು ನಿಷ್ಠುರವಾದಿಯೋ, ಸ್ವಪ್ರೇರಿತ ಮೌಢ್ಯದ ಬಗ್ಗೆ ಅಷ್ಟೆ ನಿಷ್ಠುರವಾದಿ. ಆತನ ಈ ನಿಷ್ಠುರ ಸ್ಪಷ್ಟತೆಗಾಗಿಯೇ ಆತ ಬೌದ್ಧಿಕ ಪ್ರಮಾಣಿಕ ಒಳಹೊರಗೂ ಒಂದಾದವ. ಒಳ-ಹೊರಗೊಂದು ಪರಿಯ ಕುಟಿಲವನ್ನು ಕಂಡರಿಯದವ ತನ್ನಲ್ಲೇ ತಪ್ಪಿದ್ದರೂ ಎನ್ನ ತಪ್ಪು ಅನಂತಕೋಟಿ (ಬಸವ.) ಎಂದು ತಟ್ಟನೇ ತಪ್ಪೊಪ್ಪಿಕೊಳ್ಳುವವ. ಅದಕ್ಕಾಗಿಯೇ ಆತ ಅಂದಿನವರಿಗೂ ಆದರ್ಶ, ಇಂದಿನವರೆಗೂ ಆದರ್ಶ. ಬಸವಣ್ಣನ ಸಮಗ್ರ ಆಲೋಚನೆಗಳು ಸಮಸ್ತರಿಗೂ ಹಿಡಿದಿರಬಹುದು. ಆದರೆ ಆತನ ಪ್ರಮಾಣಿಕತೆ, ತಪ್ಪೊಪ್ಪಿಕೊಳ್ಳುವಿಕೆ ತನ್ನದೇ ಸತ್ಯವೆಂದು ಸಾಧಿಸದಿರುವಿಕೆ; ಉನ್ನತ ವಿಚಾರವನ್ನು ಹೇಳಿದಾಗಲೂ ಬೀಗಿಕೊಳ್ಳದ ಕೈಂಕರತೆ. ಇವುಗಳನ್ನಾದರೂ ಮೆಚ್ಚಿಕೊಳ್ಳಬಹುದಲ್ಲ? ಬಸವಣ್ಣನನ್ನು ಸಮಗ್ರವಾಗಿ ಅಲ್ಲದಿದ್ದರೂ ಅಂಶಿಕವಾಗಿಯಾದರೂ ಒಪ್ಪಿಕೊಳ್ಳದಿರುವವನ ಪ್ರಮಾಣಿಕತೆ ಅಂತ್ಯಂತ ಸಂದೇಹಾಸ್ಪದ.

ಬಸವಣ್ಣ ಜನತೆಯ ಜೀವನವನ್ನೆಲ್ಲ ವ್ಯಾಪಿಸಿಕೊಂಡಿದ್ದ ಜಿಡ್ಡನ್ನು ತೊಳೆಯಲು ಪಟ್ಟ ಪ್ರಯತ್ನ ಆತನ ವಚನಗಳ ತುಂಬ ತುಂಬಿ ನಿಂತಿದೆ. ಆದರೆ, ಅದನ್ನರಿಯುವ ಕಣ್ಣು ಬೇಕು. ಮನಬೇಕು. ಆತನ ಪ್ರಯತ್ನ-ದಿಕ್ಕುಗಳನ್ನು ಗುರುತಿಸದೇ ಆತನ ಅಂತರಂಗವನ್ನರಿತುಕೊಳ್ಳದೇ ಅವನ ಹೆಸರಿನಲ್ಲಿ ನಡೆಸುವ ಚಟುವಟಿಕೆಗಳ ಮೇಲೂ ಅಂದೇ ಅಂಧಾಚಾರದ ಪಾಚಿ ಬೆಳೆದೀತು. ಮುಂದಿನವರಿಗೂ ಅಪಾಯದ ಕಂದರವಾಗಿ ಬಾಯ್ದೆರೆದು ನಿಂತೀತು.

---

ಯಾವನು ಪ್ರಾಣದಿಂದಿರುವಾಗಲೇ ತನ್ನ ಆತ್ಮವನ್ನು ದೇಹದಿಂದ ಸಾಧ್ಯವಾದ ಮಟ್ಟಿಗೂ ದೂರವಾಗಿ, ಪರಿಶುದ್ಧವಾಗಿ ಇಟ್ಟಿರುತ್ತಾನೋ ಅವನು ಮರಣಾನಂತರ ಈಶ್ವರನ ಸನ್ನಿಧಿಯಲ್ಲಿ ಶುದ್ಧ ಆತ್ಮಗಳ ಸಮೂಹದಲ್ಲಿ ಹೋಗಿ ಸೇರಿ ಪೂರ್ಣ ಸತ್ಯಜ್ಞಾನವನ್ನು ಹೊಂದುವನು.

—ಸೋಕ್ರಟೀಸ್



# ಹೆಣ ಮಾರುವ ಹಂತಕರು

—ಬಿ. ಸುಬ್ರಾಯ ಅಡಿಗ

ನಿವೃತ್ತ ಉಪಾಧ್ಯಾಯರು, ಸಂಡೂರು, ಬಳ್ಳಾರಿ ಜಿಲ್ಲೆ-583119

ಕಳೆದ ಶತಮಾನದ ಒಂದು ರೋಮಾಂಚಕಾರಿ ಕ್ರಿಸ್‌ಮಸ್ ಅದು. ಇಂಗ್ಲೆಂಡಿನ ಎಡಿನಬರಾ ಎಂಬ ನಗರದ ಒಂದು ಕೋರ್ಟಿನಲ್ಲಿ ಆ ದಿನ ಕಿಕ್ಕಿರಿದ ಜನ ಸಂದಣಿ ಸೇರಿತ್ತು. ಕೋರ್ಟಿನ ವೇಳೆ ಮುಗಿದಿದ್ದರೂ ಜನ ರೋಷವನ್ನು ಗಮನಿಸಿ ಕೇಸಿನ ವಿಚಾರಣೆಯನ್ನು ರಾತ್ರಿಗೂ ಮುಂದುವರೆಸಬೇಕಾಯಿತು. ಜನ ರೋಷ ಅದೆಷ್ಟು ಭಯಂಕರವಿತ್ತೆಂದರೆ ಕೇಸನ್ನು ಕ್ಷಣ ಕಾಲವೂ ಮುಂದೂಡುವಂತಿರಲಿಲ್ಲ. ಕೋರ್ಟಿನ ಹೊರಗೆ ಜನ ಸಮೂಹ ಹಂತಕರಿಗೆ ಮರಣದಂಡನೆ ವಿಧಿಸಬೇಕೆಂದು ಕೂಗಾಡುತ್ತಿತ್ತು. ಪಟ್ಟಣದ ಎಲ್ಲೆಡೆಯಲ್ಲೂ ಬಿಸಿ ಬಿಸಿ ಚರ್ಚೆ ಸಾಗಿತ್ತು. ಆದರೆ ಕೋರ್ಟಿನೊಳಗೆ ಮಾತ್ರ ಸ್ತಬ್ಧತೆ ಆವರಿಸಿತ್ತು. ನಿರ್ದೋಷಿಗಳನ್ನು ಕೊಲೆಗೈದ ಕೆಲ ವ್ಯಕ್ತಿಗಳು ಪಂಜರದಲ್ಲಿ ನಿಂತಿದ್ದು, ಜನ ಅವರನ್ನೇ ದಿಟ್ಟಿಸುತ್ತಿದ್ದರು. ಎಲ್ಲರೂ ತೀರ್ಪಿನ ಹಾದಿ ಕಾಯುತ್ತಿದ್ದರು. ಇರುಳಿಡೀ ವಿಚಾರಣೆ ನಡೆದ ಬಳಿಕ ಬೆಳಗ್ಗೆ ೭ ಗಂಟೆಗೆ ನ್ಯಾಯಧೀಶರ ತೀರ್ಪು ಹೊರ ಬಿತ್ತು — "ಕೊಲೆಗಳ ಆರೋಪ ರುಜುವಾತಾದುದರಿಂದ ವಿಲಿಯಮ್ ಬರ್ಕನಿಗೆ ಗಲ್ಲಿನ ಶಿಕ್ಷೆ ನೀಡಲಾಗುವುದು."

ಜನರ ಉದ್ವೇಗ ಮೆಲ್ಲ ಮೆಲ್ಲನೆ ತಗ್ಗಿದರೂ ಅವರೆಲ್ಲ ಅಪರಾಧಿ ವಿಲಿಯಂ ಬರ್ಕ್, ವಿಲಿಯಮ್ ಹೇರ್ ಹಾಗೂ ಶ್ರೀಮತಿ ಎಮಂಡ್ ಯುಂಗಲ್‌ರ ಕೃತ್ಯಗಳನ್ನು ತಿಳಿದು ದಂಗಾದರು. ಇವರ ಮೇಲೆ ೧೬ ವ್ಯಕ್ತಿಗಳ ಕೊಲೆಯ ಆರೋಪವಿತ್ತು. ಪೋಲಿಸರಿಗೆ ತಿಳಿದ ಪ್ರಕರಣಗಳು ಇಷ್ಟೇ. ಇವರಲ್ಲದೆ ಬೇರೆಷ್ಟು ಜನರನ್ನು ಕೊಲೆಗೈದಿದ್ದರೆಂಬುದು ಸ್ವತಃ ಅಪರಾಧಿಗಳಿಗೆ ತಿಳಿದಿರಲಿಲ್ಲ!

ಆ ಕಾಲದಲ್ಲಿ ಎಡಿನಬರಾದಲ್ಲಿ ಡಾ. ನಾಕ್ಸ್ ಎಂಬ ಪ್ರಖ್ಯಾತ ಸರ್ಜನ್ ಇದ್ದ. ಆತ ಒಂದು ಕೋಚಿಂಗ್ ಸ್ಕೂಲ್ ತೆರೆದಿದ್ದ. ಈ ಸ್ಕೂಲಿನಲ್ಲಿ ೫೦೦ ಕ್ಕೂ ಹೆಚ್ಚು ವಿದ್ಯಾರ್ಥಿಗಳಿದ್ದರು. ಮಾನವ ದೇಹದ ರಚನೆಯನ್ನು ತಿಳಿಯ ಹೇಳಲು, ಡಾ ನಾಕ್ಸ್‌ನಿಗೆ ಶವ ವಿಚ್ಛೇದನಕ್ಕಾಗಿ ಬಹಳಷ್ಟು ಹೆಣಗಳು ಬೇಕಿದ್ದವು, ಹೆಣಗಳನ್ನು ಪಡೆಯುವುದಕ್ಕಾಗಿ ನಾಕ್ಸ ವಿಲಿಯಮ್ ಬರ್ಕನನ್ನು ಭೇಟಿಯಾದ. ಹೆಚ್ಚು ಹಣಕ್ಕೆ ಹೆಣ ಒದಗಿಸಲು ಬರ್ಕ್ ಒಪ್ಪಿದ.

ಅಂದೇ ಸಂಜೆ ಬರ್ಕ್ ಎಡಿನಬರಾದ ಏಕಮಾತ್ರ ಸಮಾಧಿ ಸ್ಥಾನಕ್ಕೆ ಹೋದ ಮತ್ತು ಕಾವಲುಗಾರನಿಗೆ ಲಂಚವಿತ್ತು, ಅವನಿಗೆ ತನ್ನ ಯೋಜನೆ ತಿಳಿಸಿದ. ಅದರ ಪ್ರಕಾರ, ಆತ ಮರುದಿನದಿಂದಲೇ ಸಮಾಧಿ ಸ್ಥಾನದಲ್ಲಿ ಹೊಚ್ಚ ಹೊಸದಾಗಿ ಹೂಳಲಾದ ಹೆಣಗಳನ್ನು ರಾತ್ರಿ ವೇಳೆ ಹೊರತೆಗೆಯತೊಡಗಿದ ಮತ್ತು ಬರ್ಕ್ ಅವನ್ನು ಡಾ.॥ ನಾಕ್ಸನ ಬಳಿಗೊಯ್ಯುತ್ತಿದ್ದ. ಆದರೆ ಎಷ್ಟೋ ಸಲ ನಗರದಲ್ಲಿ ಯಾವುದೇ ಸಾವು ಸಂಭವಿಸಿದಾಗ ಬರ್ಕ್‌ನಿಗೆ ಹೊಸ ಹೆಣ ಸಿಗುತ್ತಿರಲಿಲ್ಲ ಆಗ ಆತ ಡಾ.॥ ನಾಕ್ಸನ ಕಟುವಚನಗಳನ್ನು ಕೇಳಬೇಕಾಗುತ್ತಿತ್ತು.

ಆಗಲೇ ಬರ್ಕ್‌ನ ಮೆದುಳಿನಲ್ಲೊಂದು ಹೊಸ ಯೋಜನೆ ಮೂಡಿತು ಆತ ತನ್ನ ಮಿತ್ರ ಹೇರ್‌ನನ್ನು ಇದಕ್ಕೆ ಸೇರಿಸಿಕೊಂಡ. ಹೇರ್ ಒಂದು ಹೋಟೇಲಿನ ಮಾಲೀಕ. ಅವನಷ್ಟೆ ಅಲ್ಲ —— ಅವನ ಸುಂದರ ಪತ್ನಿ ಎಮಂಡ್ ಯುಂಗಲ್ ಕೂಡ ಸೇರಿದಳು. ಆಕೆ ಮುಗ್ಧ ಯುವಕರನ್ನು ತನ್ನ ಹಾವ ಭಾವದಿಂದ ಆಕರ್ಷಿಸುತ್ತಿದ್ದಳು ಮತ್ತು ತನ್ನ ಸೌಂದರ್ಯದ ಬಲೆಗೆ ಸಿಲುಕಿಸಿ ಹೋಟೇಲಿಗೆ ಕರೆ ತರುತ್ತಿದ್ದಳು. ಬರ್ಕ್ ಹಾಗೂ ಹೇರ್ ತಮ್ಮ ಸ್ಟಾಕಿನಲ್ಲಿ ಯಾವಾಗಲೂ ಒಂದು ಹೆಣವನ್ನು ತಪ್ಪದೆ ಇರಿಸುತ್ತಿದ್ದರು. ಈ ಹೆಣಗಳನ್ನು ಚಹ ಇಲ್ಲವೇ ವೀನು ಪ್ಯಾಕ್ ಮಾಡುವ ದೊಡ್ಡ ಪೆಟ್ಟಿಗೆಗಳಲ್ಲಿಟ್ಟು ಡಾ. ನಾಕ್ಸನ ಬಳಿ ಕಳುಹಿಸಲಾಗುತ್ತಿತ್ತು. ಆಗ ಯಾರಿಗೂ ಸಂದೇಹವಾಗದಷ್ಟೆ?

ಆದರೆ ಅದೊಂದು ದಿನ ಈ ಗುಟ್ಟು ಬಯಲಾಯಿತು, ಹೇರ್‌ನ ಹೋಟೇಲಿನಲ್ಲಿ ಏರ್ಪಡಿಸಲಾದ ಒಂದು ವಿಶೇಷ ಸಮಾರಂಭದಲ್ಲಿ ಹೇರ್ ಹಾಗು ಬರ್ಕ್ ಚೆನ್ನಾಗಿ ಮದ್ಯ ಕುಡಿದರು. ಇವರ ಕಾರ್ಯಕ್ರಮ ನಡೆಯುತ್ತಿದ್ದ ಹಾಲಿನ ಪಕ್ಕದ ಕೋಣೆಯಲ್ಲೇ ಮಂಚದ ಮೇಲೆ ಒಂದು ಹೆಣವಿತ್ತು. ಅದನ್ನು ಪೆಟ್ಟಿಗೆಯೊಳಗೆ ಹಾಕಿರಲಿಲ್ಲ ನಿವೃತ್ತ ಸೈನಿಕ ಅಧಿಕಾರಿಯ ಹೆಂಡತಿಯೂ ಈ ಸಮ್ಮೇಳನದಲ್ಲಿ ಭಾಗವಹಿಸಿದ್ದಳು. ಸಮಾರಂಭದ ಬಳಿಕ ಆಕೆ ಪತಿಯೊಂದಿಗೆ ಮನೆಗೆ ಹೊರಟಾಗ ಮೆಟ್ಟಿಲುಗಳತ್ತ ಸಾಗುವ ಬದಲು ತಪ್ಪಾಗಿ ಆ ಕೋಣೆಯೊಳಗೆ ಹೋದಳು. ಅಲ್ಲಿ ಮಂಚದ ಮೇಲೆ ಯುವತಿಯೊಬ್ಬಳ ಹೆಣವಿತ್ತು. ಅದನ್ನು ಕಾಣುತ್ತಲೇ ಇಬ್ಬರೂ ಬೆಚ್ಚಿದರು. ಹೆದರುತ್ತ ಹೊರಬಿದ್ದು ಎಲ್ಲರ ಕಣ್ಣು ತಪ್ಪಿಸಿ ಅವರು ಠಾಣೆಗೆ ಹೋದರು.

ತುಸು ಹೊತ್ತಿನಲ್ಲೇ ಪೋಲೀಸರು ಹೋಟೇಲು ಸುತ್ತುವರಿದು ಬರ್ಕ್ ಹೇರ್ ಹಾಗೂ ಹೇರ್‌ನ ಹೆಂಡತಿಯನ್ನು ಸೆರೆಹಿಡಿದರು. ಪೋಲಿಸರು ತಮ್ಮದೇ ರೀತಿಯಿಂದ ವಿಚಾರಣೆ ನಡೆಸಿದಾಗ ಎಲ್ಲ ತಪ್ಪುಗಳೂ ಹೊರಬಿದ್ದವು. ಸಂಜೆಯೊಳಗೆ ಇಡೀ ಇಂಗ್ಲೆಂಡಿನಲ್ಲಿ ಕೋಲಾಹಲವುಂಟಾಯಿತು. ತಮ್ಮ ಸಂಬಂಧಿಕರನ್ನು ಕಳೆದು ಕೊಂಡಿದ್ದ ಜನ ಸೇಡು ತೀರಿಸಿಕೊಳ್ಳಲು ಮುಂದಾದರು. ಬರ್ಕ್ ಹಾಗೂ ಅವನ ಸಹಕಾರಿಗಳನ್ನು ತಮ್ಮ ವಶಕೊಪ್ಪಿಸುವಂತೆ ಸರಕಾರವನ್ನು ವಿನಂತಿಸಿದರು. ಜನರ ರೊಚ್ಚನ್ನು



ಗಮನಿಸಿ ಆ ರಾತ್ರಿಯೇ ವಿಶೇಷ ಕೋರ್ಟಿನಲ್ಲಿ ವಿಚಾರಣೆ ನಡೆಸಬೇಕಾಯಿತು. ಬೆಳಿಗ್ಗೆ ಬರ್ಕ್‌ನಿಗೆ ಗಲ್ಲಿನ ಶಿಕ್ಷೆ ವಿಧಿಸಲಾಯಿತು. ಉಳಿದವರು ಸಂದೇಹದ ಲಾಭದಿಂದ ಬಿಡುಗಡೆಯಾದರು. ಆದರೆ ಸಿಟ್ಟಿಗೆದ್ದ ಜನತೆ ಸುಮ್ಮನೆ ಬಿಟ್ಟೀತೆ? ಶ್ರೀಮತಿ ಎಮಂಡ್ ಯುಂಗಲ್ ಊರು ಬಿಟ್ಟು ಓಡಿ ಹೋಗಬೇಕಾಯಿತು. ಹೇರ್‌ನ ಸ್ಥಿತಿ ಅದೆಷ್ಟು ದಯನೀಯವಾಗಿತ್ತೆಂದರೆ ಕೆಲ ದಿನಗಳ ಬಳಿಕ ಆತ ಬೀಕೆಂದು ನಗರದಲ್ಲಿ ಭಿಕ್ಷೆ ಬೇಡತೊಡಗಿದ. ಅವನ ನೆತ್ತರು ಹೀರುವ ಬಯಕೆ ಹೊಂದಿದ ಮನುಷ್ಯನೊಬ್ಬ ಅವನನ್ನು ಒಣ ಸುಣ್ಣದ ರಾಶಿಯ ಮೇಲೆ ಹಾಕಿದ. ಅವನ ತಲೆ ಬಿಸಿ ಸುಣ್ಣದ ರಾಸಿಯೊಳಗೆ ನುಗ್ಗಿತು. ಪರಿಣಾಮವಾಗಿ ಒಂದು ಕಣ್ಣು ಕುರುಡಾಯಿತು.

ಶೋಧದ ಲೋಭದಿಂದಾಗಿ ಹೆಣಗಳ ಮೂಲವನ್ನರಿಯಲು ಪ್ರಯತ್ನಿಸದ ಡಾ.॥ ನಾಕ್ಸ ಶಾಂತಿಯಿಂದ ಬದುಕದಾದ. ಎಡಿನಬರಾದ ಜನತೆ ಅವನನ್ನು ಅದೆಷ್ಟು ಬೈದಿತೆಂದರೆ ಆತ ಒಮ್ಮೆಲೇ ಪಟ್ಟಣಬಿಟ್ಟು ಹೊರಟು ಹೋದ. ಮುಂದೆ ಆತ ಆತ್ಮಹತ್ಯೆ ಮಾಡಿಕೊಂಡ!

(ಹಿಂದಿಯಿಂದ)

## ಬಸವತತ್ವ ಪ್ರೇಮಿಗಳಲ್ಲಿ ಒಂದು ಸಂತೋಷದ ಮನವಿ

ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿ "ಶ್ರೀ ಬಸವೇಶ್ವರ ಅಧ್ಯಯನ ಸಂಸ್ಥೆ" ಯನ್ನು ತೆರೆಯಲು ಬೀದರ್ ಜಿಲ್ಲಾ ಭಾಲ್ಕಿಯ ಹಿರೇಮಠ ಸಂಸ್ಥಾನದ ಪೂಜ್ಯ ಶ್ರೀ ಮ.ಘ ಚ. ಚೆನ್ನಬಸವ ಪಟ್ಟದೇವರು ಮನವಿ ಮಾಡಿಕೊಂಡಿದ್ದರ ಮೇರೆಗೆ ಗುಲ್ಬರ್ಗಾ ವಿಶ್ವವಿದ್ಯಾಲಯದ ಉಪಕುಲಪತಿಗಳಾದ ಡಾ॥ ಹಾಮಾ ನಾಯಕರು ಹೃತ್ಪೂರ್ವಕವಾಗಿ ಸ್ವಾಗತಿಸುವುದರ ಮೂಲಕ ಒಪ್ಪಿಗೆ ಕೊಟ್ಟಿದ್ದು, ಅದಕ್ಕಾಗಿ ಐದು ಲಕ್ಷ ರೂಗಳ ನಿಧಿಯನ್ನು ಠೇವಣಿಯಾಗಿಡಲು ಸೂಚಿಸಿದ್ದಾರೆ. ಸಮಾಜಾಭಿಮಾನಿಗಳಿಗೆ, ಬಸವತತ್ವ ಪ್ರೇಮಿಗಳಿಗೆ ಇದೊಂದು ಅಪೂರ್ವ ಅವಕಾಶ. ಆದುದರಿಂದ ಮುಕ್ತಮನದಿಂದ, ಉದಾರ ಹಸ್ತದಿಂದ ಈ ಪವಿತ್ರ ಮಣಿಹಕ್ಕೆ ಧನಸಹಾಯ ಮಾಡಬೇಕೆಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ. ಇಲ್ಲಿ ನಮೂದಿಸಿರುವ ವಿಳಾಸಕ್ಕೆ ಚೆಕ್ಕು, ಡ್ರಾಫ್ಟ್, ಪೋಸ್ಟಲ್ ಆರ್ಡರ್, ಮನಿಯಾರ್ಡರ್ ಮೂಲಕ ಕಳುಹಿಸಬೇಕಾಗಿ ವಿನಂತಿ.

ಶ್ರೀ ಮ. ಘ. ಚ. ಚೆನ್ನಬಸವಪಟ್ಟದೇವರು, ಅಧ್ಯಕ್ಷರು,
ಶ್ರೀ ಬಸವೇಶ್ವರ ಅಧ್ಯಯನ ಸಂಸ್ಥೆ, ಭಾಲ್ಕಿ, ಬೀದರ್ ಜಿಲ್ಲಾ.

(ವೈಜ್ಞಾನಿಕ ಲೇಖನ)

# ಬೃಹತ್ ಸರೀಸೃಪಗಳು

— ವಿ. ಪ್ರಭಾಕರ್
ಶ್ರೀ ನಿವಾಸ ನಿಲಯ 13 ನೇ ಕ್ರಾಸ್, ಕೆ. ಟಿ. ಜೆ ನಗರ ದಾವಣಗೆರೆ — 577002

ನಾವು ಇಂದು ವಾಸಿಸುತ್ತಿರುವ ಜಗತ್ತು ನಿರ್ಮಾಣಗೊಂಡು ಹಲವು ಕೋಟಿ ವರ್ಷಗಳಾಗಿವೆ. ಏಕಾಣುಜೀವಿಯಿಂದ ಹಿಡಿದು ಲಕ್ಷಾಂತರ ಜೀವಕೋಶಗಳನ್ನು ಹೊಂದಿರುವ ಪ್ರಾಣಿ, ಪಕ್ಷಿಗಳು ಈ ಸೃಷ್ಟಿಯಲ್ಲಿವೆ. ಜೀವಿಗಳ ಉಗಮ ಈ ಜಗತ್ತಿನ ಮೇಲೆ ಹೇಗಾಯಿತೆಂದು ಹೇಳುವುದು ಸುಲಭವಲ್ಲ. ಆದರೆ ಜೀವಿಗಳ ವಿಕಾಸದ ಹಂತಗಳನ್ನು ನಾವು ವಿವರಿಸಬಹುದಷ್ಟೆ. ನಮ್ಮ ಭೂಮಿಯು ಈ ಜೀವ ವಿಕಾಸದ ಹಾದಿಯಲ್ಲಿ ಹಲವು ಪ್ರಮುಖ ಘಟ್ಟಗಳನ್ನು ಕಂಡಿತು. ಭೂವಿಜ್ಞಾನಿಗಳು ಈ ಕಾಲವನ್ನು ಭೂಗೋಳಿಕ ಯುಗ ಎಂದು ಕರೆದಿರುವರು. ಭೂಮಿಯ ಪಂಚಾಂಗದ ಪ್ರಕಾರ, ಪಾಲಿಯೋಜೋಯಿಕ್ ಯುಗದಲ್ಲಿ ಜೀವಿಗಳು ಈ ಭೂಮಿಯ ಮೇಲೆ ಕಾಣಿಸಿಕೊಂಡವು.

ಪಾಲಿಯೋಜೋಯಿಕ್ ಯುಗದ ನಂತರ ಆರಂಭವಾಗುವುದೇ ಮೆಸೋಜೋಯಿಕ್ ಭೂಗೋಳಿಕ ಯುಗ. ಈ ಕಾಲದಲ್ಲಿ ಭೂಮಿಯ ಮೇಲೆ ಬೃಹತ್ ಸರೀಸೃಪಗಳು ಕಾಣಿಸಿಕೊಂಡವು. ಇದರ ಅವಧಿ ಸುಮಾರು 170 ದಶಲಕ್ಷ ವರ್ಷಗಳಾಗಿತ್ತು. ಭೂಮಿ ಜ್ಞಾನಿಗಳ ಪ್ರಕಾರ, ಈ ಯುಗದ ಆರಂಭದಲ್ಲಿ ಹಲ್ಲಿಗಳು ಹಾಗೂ ಉರಗಗಳು ಕಾಣಿಸಿಕೊಂಡವು. ಅದಾದ ನಂತರ, ಟ್ರೈಯಾಸಿಕ್ ಜುರಾಸಿಕ್ ಎಂಬ ಉಪಯುಗಗಲ್ಲಿ ಡೈನೋಸಾರ್ ಅಥವಾ ಹೆಗ್ಗಾಳಿಗಳು ಜನ್ಮ ತಳೆದವು. ಇವು ನೋಡಲು ಭಯಾನಕವಾಗಿದ್ದು, ಅಪಾರ ಬಲವನ್ನು ಹೊಂದಿದ್ದ ಪ್ರಾಣಿಗಳಾಗಿದ್ದವು, ಇಂತಹ ವಿಚಿತ್ರ ಪ್ರಾಣಿಗಳು ಹೇಗೆ ಸೃಷ್ಟಿಯಾದವೆಂಬುದನ್ನು ವಿವರಿಸಲು ಜೀವ ಶಾಸ್ತ್ರಜ್ಞರಿಗೆ ಇನ್ನೂ ಸಾಧ್ಯವಾಗಿಲ್ಲ. ತೀರಾ ಇತ್ತೀಚಿನ ಕೆಲವು ಸಿದ್ಧಾಂತಗಳ ಪ್ರಕಾರ, ಮೆಸೋಜೋಯಿಕ್‌ನ ಆದಿಭಾಗದಲ್ಲಿ ನೆಲೆಸಿದ್ದ ಸರೀಸೃಪಗಳ ಜೀವಾಣು ಗಳಲ್ಲಿ ಆದ ಕ್ಷಿಪ್ರ ಬದಲಾವಣೆ ಅಥವಾ Mutationನಿಂದ ಈ ರೀತಿಯ ದೈತ್ಯರೂಪ ಅವುಗಳಿಗೆ ಬಂದಿರಬಹುದೆಂದು ಹೇಳಲಾಗುತ್ತಿದೆ. ಸೃಷ್ಟಿಯ ವಿವಿಧ ಹಂತಗಳಲ್ಲಿ ಯಾವ ಜೀವವರ್ಗ, ಪ್ರಭೇಧಗಳಲ್ಲೂ ಕಂಡು ಬರದ ವಿಚಿತ್ರ ರೂಪ ಈ ಡೈನೋ ಸಾರ್‌ಗಳಿಗೆ ಇದ್ದಿತು.

ಬೃಹತ್ ಸರೀಸೃಪಗಳು ಹೆಚ್ಚಾಗಿ ಭೂ ಪ್ರದೇಶಗಳಲ್ಲೇ ವಾಸಿಸುತ್ತಿದ್ದವು.



ಇವುಗಳ ಆಕಾರ ಸಮುದ್ರದ ತಿಮಿಂಗಿಲಗಳನ್ನು ಹೋಲುತ್ತಿತ್ತು. ಡೈನೋಸಾರ್‌ಗಳ ಎತ್ತರ ಸುಮಾರು ನೂರು ಅಡಿಗಳಿರಬಹುದೆಂದು ಅಂದಾಜು. ಇದಕ್ಕೆ ಕಾರಣ ಅದರ ಎತ್ತರವಾದ ಕತ್ತು ಹಾಗೂ ತಲೆ ಒಂದೊಂದು ಹೆಗ್ಗಾಳಿಯೂ ಸುಮಾರು ಅರವತ್ತು ಟನ್‌ಗಳವರೆಗೆ ದೇಹಭಾರ ಹೊಂದಿತ್ತು. ಆ ಕಾಲದಲ್ಲಿ ಭೂಮಿಯ ಮೇಲೆ ವಾಸಿಸಿದ್ದ ಪ್ರಾಣಿಗಳನ್ನು ಇವು ಆಕಾರ ಹಾಗೂ ರೂಪಗಳಲ್ಲಿ ಮೀರಿಸಿದ್ದವು. ಇವು ಹೆಚ್ಚಾಗಿ ಕುರೂಪಿಯಾದ ಪ್ರಾಣಿಗಳಾಗಿದ್ದವು. ಇವುಗಳಲ್ಲಿ ಮುಖ್ಯವಾದ ಪ್ರಾಣಿಗಳನ್ನು ಹೆಸರಿಸುವುದಾದರೆ, ಡಿಪ್ಲೋಡಾಕಸ್, ಟೈರನೋ ಸಾರಸ್ ಮತ್ತು ಸ್ಟೆಜೋಸಾರಸ್ ಇವುಗಳಲ್ಲಿ ನಮ್ಮ ಗಮನ ಸೆಳೆಯುವ ಹೆಗ್ಗಾಳಿಯೆಂದರೆ, ಟೈರನೋಸಾರಸ್ ಟೈರನೋಸಾರಸ್ ಎಂಬ ಮಾಂಸ ಭಕ್ಷಕ ಸರೀಸೃಪ ಸುಮಾರು 50 ಅಡಿ ಉದ್ದವಿದ್ದು, ತನ್ನ ಬೃಹತ್ತಾದ ಶಿರವನ್ನು ಸುಮಾರು 20 ಅಡಿ ಎತ್ತರಕ್ಕೆ ಭೂಮಿಯಿಂದ ಎತ್ತುತ್ತಿದ್ದಿತೆಂದು ಹೇಳಲಾಗಿದೆ. ಜುರಾಸಿಕ್ ಯುಗದ ಕೆಲವು ಪಳೆಯುಳಿಕೆಗಳಲ್ಲಿ, ಗರಗಸದಂತಹ ಹಲ್ಲುಗಳನ್ನು ಹೊಂದಿದ್ದ ಸರೀಸೃಪವೊಂದರ ಭಗ್ನಾವಶೇಷಗಳು ಪತ್ತೆಯಾಗಿವೆ. ಹೆಗ್ಗಾಳಿಗಳು ನಾಲ್ಕು ಕಾಲುಗಳು ಹಾಗೂ ಉದ್ದನೆಯ ಬಾಲಗಳನ್ನು ಹೊಂದಿದ್ದವು. ಬ್ರಾಂಟೋಸಾರಸ್ ಎಂಬ ಹೆಗ್ಗಾಳಿಯು 75 ಟನ್ ತೂಕವಿದ್ದಿತು.

ಹೆಗ್ಗಾಳಿಗಳು ಜೀವವರ್ಗದ ವಂಶಾವಳಿಯಲ್ಲಿ ಅಷ್ಟೊಂದು ಮುಂದುವರಿದ ಪ್ರಾಣಿಗಳಾಗಿರಲಿಲ್ಲ. ಜೀವಶಾಸ್ತ್ರಜ್ಞರ ಪ್ರಕಾರ, ಹೆಗ್ಗಾಳಿಗಳ ಮೆದುಳು ವಿಪರೀತ ಚಿಕ್ಕದಿದ್ದು, ಅವು ಅಸಂಘಟಿತ ನರ ವ್ಯವಸ್ಥೆಯನ್ನು ಹೊಂದಿದ್ದವು. ಅಲ್ಲದೆ ಅವು ಬುದ್ಧಿವಂತ ಪ್ರಾಣಿಗಳಾಗಿರಲಿಲ್ಲ.

ಕೆಲವು ಸರೀಸೃಪಗಳು ಎಷ್ಟು ದೊಡ್ಡದಿದ್ದವೆಂದರೆ ಅವುಗಳ ದೇಹದ ಕೊನೆಯ ಭಾಗಗಳನ್ನು ನಿಯಂತ್ರಿಸಲು ಬಾಲದ ಕೊನೆಯಲ್ಲಿ ಇನ್ನೊಂದು ಮೆದುಳಿನ ಅವಶ್ಯಕತೆಯಿತ್ತೆಂದು ವಿಜ್ಞಾನಿಗಳು ವ್ಯಂಗ್ಯವಾಗಿ ಹೇಳುತ್ತಾರೆ. ಅವುಗಳ ಮೆದುಳು ದೇಹದ ಅಗತ್ಯಕ್ಕಿಂತ ಕಿರಿದಾಗಿತ್ತು. ಅಮೇರಿಕಾದ ಯೋಮಿಂಗ್ ಎಂಬ ಸ್ಥಳದಲ್ಲಿ 1870 ರಲ್ಲಿ ಸಿಕ್ಕ ಒಂದು ಡೈನೋಸಾರ್‌ನ ಮೆದುಳು ಕೋಳಿ ಮೊಟ್ಟೆಯಷ್ಟು ಸಣ್ಣದಾಗಿತ್ತು. ಜೀವಶಾಸ್ತ್ರಜ್ಞರ ಪ್ರಕಾರ,- ಇಂತಹ ಮೆದುಳಿನ ಜೀವಿಗಳು ಬಹುಕಾಲ ಭೂಮಿಯ ಮೇಲೆ ಬದುಕಲಾರವು. ಹೀಗಾಗಿ ಅವು ಜೀವಿತಕ್ಕೆ ಹೊರಾಡಬೇಕಾಯಿತು.

ಕೆಲವು ಸಿದ್ಧಾಂತಗಳ ಪ್ರಕಾರ ಹೆಗ್ಗಾಳಿಗಳ ಈ ಅವನತಿಗೆ ಅವುಗಳ ಮೆದುಳು ಕಾರಣವಲ್ಲ. ಮುಖ್ಯ ಕಾರಣವಾಗಿದ್ದಿದು ಅವುಗಳ ರಕ್ತ. ಅವು ತಮ್ಮ ದೇಹದ ರಕ್ತದ ಉಷ್ಣತೆಯನ್ನು ಕಾಯ್ದುಕೊಳ್ಳಲಾರದೆ ಹೋದವು. ಬಾನಿನಲ್ಲಿ ಸೂರ್ಯ ಮೂಡಿದ ವೇಳೆಯಲ್ಲಿ ಅವು ಬಂದು ತಮ್ಮ ರಕ್ತವನ್ನು ಬಿಸಿಯಾಗಿಟ್ಟುಕೊಳ್ಳುತ್ತಿದ್ದವು ಆದರೆ ಬರುಬರುತ್ತಾ, ಭೂಗೋಳಿಕ ಬದಲಾವಣೆಗಳಾಗಿ ಹಿಮಯುಗ ಕಾಲಿ

ಟ್ಟಂತೆ ಈ ಜೀವಿಗಳು ಹೊರಬರಲಾರಗಲಿಲ್ಲ, ವಿಪರೀತ ಹಿಮದಿಂದ ಅವು ಅವನತಿ ಹೊಂದಿದವೆಂದು ಸಿದ್ಧಾಂತವೊಂದು ಹೇಳುತ್ತದೆ.

ತೀರಾ ಇತ್ತೀಚಿನ ವಾದಗಳ ಪ್ರಕಾರ, ಹೆಗ್ಗಾಳಿಗಳು ಈ ಹಿಂದೆ ಭೂಮಿಯ ಮೇಲೆ ಕಾಣಿಸಿಕೊಂಡ ಒಂದು ಧೂಮಕೇತುವಿನ ಹೊರವ್ಯೆಯಿಂದ ಬಿದ್ದ ರಾಸಾಯನಿಕಗಳ ಪರಿಣಾಮದಿಂದ ನಿರ್ನಾಮವಾದವು ಎಂದು ಹೇಳಲಾಗುತ್ತಿದೆ. ಭೂಮಿಯ ಅಯಸ್ಕಾಂತೀಯ ಶಕ್ತಿಯ ಬದಲಾವಣೆಯಿಂದ ಸಹಾ ಈ ಜೀವಿಗಳು ನಿರ್ನಾಮವಾಗಿವೆ ಎಂದು ಇನ್ನೊಂದುವಾದ ಹೇಳುತ್ತಿದೆ. ಆದರೆ ವಿಜ್ಞಾನಿಗಳಿಗೆ ಈ ಬಗ್ಗೆ ನಿಖರವಾಗಿ ಏನನ್ನು ಹೇಳಲು ಸಾಧ್ಯವಾಗಿಲ್ಲ. ಆದರೆ ಎಲ್ಲರೂ ಒಪ್ಪುವಂತಹ ವಾದವೆಂದರೆ, ಭೂಮಿಯ ಮೇಲಿನ ಹವಾಮಾನದ ಬದಲಾವಣೆಗಳು. ವಿಪರೀತ ಹಿಮದಿಂದ ಇವು ನಿರ್ನಾಮವಾಗಿರಬಹುದೆಂಬ ವಾದಕ್ಕೆ ಈಗ ಪುಷ್ಟಿ ಬಂದಿದೆ.

ಹೆಗ್ಗಾಳಿಗಳು ವಾಸಿಸಿದ್ದ ಯುಗವಾದ ಮೆಸೋಜೋಯಿಕ್ ಯುಗದ ಅಂತ್ಯದಲ್ಲಿ ಕೆಲವು ಹೆಗ್ಗಾಳಿಗಳು ಅಲ್ಪ ಸ್ವಲ್ಪ ಹಾರುವ ಶಕ್ತಿಯನ್ನು ಪಡೆದಿದ್ದು, ರೆಕ್ಕೆ ಪುಕ್ಕಗಳು ಅವಕ್ಕೆ ಮೂಡಿದ್ದವು. ಆರ್ಕಿಯಾಪ್ಟೆರಿಕ್ಸ್ ಎಂಬ ಪಳೆಯುಳಿಕೆಯ ಪಕ್ಷಿ ಈ ಜಾತಿಯಲ್ಲಿ ಮೊದಲನೆಯದು. ಇದು ಪಕ್ಷಿ ಸಂಕುಲಕ್ಕೆ ನಾಂದಿಹಾಡಿತು.

ಹೆಗ್ಗಾಳಿಗಳು ಇಂದು ಇಲ್ಲ. ಆದರೆ ಅವುಗಳ ವರ್ಗ ಮಾತ್ರ ಇಂದು ಉಳಿದಿದೆ. ನಾವು ಇಂದು ನೋಡುತ್ತಿರುವ ಕೆಲವು ಸರೀಸೃಪಗಳು ಇಂದೂ ಆ ವರ್ಗದ ಪ್ರತಿನಿಧಿಗಳಾಗಿವೆ. ಹೆಗ್ಗಾಳಿಗಳನ್ನು ನೀವು ಇಂದು ಪಳೆಯುಳಿಕೆಗಳಲ್ಲಿ ನೋಡಬಹುದು. ●





# ಇಪ್ಪತ್ತೊಂದನೆ ಶತಮಾನದ ಸವಾಲುಗಳನ್ನು ಎದುರಿಸಲು ಸಿದ್ಧರಾಗೋಣ


—ಜಿ. ಆರ್. ರಂಗಸ್ವಾಮಯ್ಯ

ಭಾರತೀಯ ಕೃಷಿ ಸಂಶೋಧನೆ, ಕೃಷಿ ಸಮಾಚಾರ ಸೇವಾಸಂಸ್ಥೆ (ಕನ್ನಡ ವಿಭಾಗ.) 6ನೇ ಮಹಡಿ, I.C.A.R. ಭವನ, ಡಾ॥ ಕೆ. ಎಸ್. ಕೃಷ್ಣನ್ ಮಾರ್ಗ, ಹೊಸ ದೆಹಲಿ–110012.


ನಾವು ಕಳೆದ ವರ್ಷ ಐದನೆ ವಿಶ್ವ ಆಹಾರ ದಿನವನ್ನು ಆಚರಿಸಿದ್ದೇವೆ ಕಳೆದ ವರ್ಷ ಅಂತರಾಷ್ಟ್ರೀಯ ವನವರ್ಷವೂ ಹೌದು. ಅಲ್ಲದೆ ಪ್ರತಿ ವರ್ಷವೂ ನಾವು ವನ ಮಹೋತ್ಸವವನ್ನು ಆಚರಿಸುತ್ತಿದ್ದೇವೆ. ಇವೆಲ್ಲಾ ಬರಿಯ ಆಚರಣೆಗಳಾಗಿಯೇ ಉಳಿದಿವೆ. ಹಸಿದ ಹೊಟ್ಟೆಗಳು, ಬರಿದಾಗುತ್ತಿರುವ ಆಹಾರ ಭಂಡಾರ ಹಾಗೂ ಕಾಣೆಯಾಗುತ್ತಿರುವ ಕಾಡುಗಳು ಅನೇಕ ವಿಪರ್ಯಾಸಗಳನ್ನು ನಮ್ಮ ಮುಂದಿಡುತ್ತಿವೆ. ಇಪ್ಪತ್ತೊಂದನೆ ಶತಮಾನವನ್ನು ನಾವು ಹೇಗೆ ಸ್ವಾಗತಿಸುತ್ತೇವೆಂಬುದು ಯಕ್ಷ ಪ್ರಶ್ನೆಯಾಗಿದೆ.

ಕಳೆದ ೨೫ ವರ್ಷಗಳಲ್ಲಿ ವಿಶ್ವದಲ್ಲಿ ಆಹಾರೋತ್ಪಾದನೆ ಎರಡು ಪಟ್ಟು ಹೆಚ್ಚಿದೆ. ಆದರೂ ವಿಶ್ವದ ೫೦ ಕೋಟಿ ಜನತೆ ಅನ್ನಕ್ಕಾಗಿ ಹಾತೊರೆಯುತ್ತಿದೆ. ನಮ್ಮ ಕೇಂದ್ರ ಕೃಷಿ ಮಂತ್ರಿಗಳ ಹೇಳಿಕೆಯಂತೆ ನಮ್ಮ ದೇಶದ ಉಗ್ರಾಣಗಳಲ್ಲಿ ೨೮೦ ಲಕ್ಷ ಟನ್ ಆಹಾರ ಸಂಗ್ರಹವಾಗಿದೆ. ಬೆಳೆಯುತ್ತಿರುವ ಜನಸಂಖ್ಯೆಯ ಹೊಟ್ಟೆಗೆ ಇದು ಎತ್ತ? ಒಂದೆರಡು ವರ್ಷ ಮಳೆ ಕೈಕೊಟ್ಟರೆ ಅಥವಾ ಪ್ರಾಕೃತಿಕ ವೈಪರೀತ್ಯಗಳುಂಟಾದರೆ ಈ ಉಗ್ರಾಣಗಳು ಬಹುಬೇಗ ಬರಿದಾಗುತ್ತವೆ. ಜನನ ನಿಯಂತ್ರಣದಲ್ಲಿ ಎಷ್ಟೇ ಮುನ್ನೆಚ್ಚರಿಕೆ ವಹಿಸಿದರೂ ೨೦೦೦ ಇಸ್ವಿ ಹೊತ್ತಿಗೆ ಹಸಿದ ಹೊಟ್ಟೆಗಳನ್ನು ತಣಿಸಬೇಕಾದರೆ ಇಂದಿಗಿಂತ ಶೇಕಡ ೬೦ ರಷ್ಟು ಹೆಚ್ಚು ಆಹಾರ ಉತ್ಪಾದಿಸಬೇಕಾಗುತ್ತದೆ. ಕಾಡುಗಳನ್ನು ಇದೇ ರೀತಿ ಕಡಿಯುತ್ತಿದ್ದರೆ ೨೦೦೦ ಇಸ್ವಿ ಹೊತ್ತಿಗೆ ಆಹಾರೋತ್ಪಾದನೆಯಲ್ಲಿ ಶೇಕಡ ೨೦ ರಷ್ಟು ಕಡಿತವಾಗುವುದೆಂದೂ ತಜ್ಞರು ಹೇಳುತ್ತಾರೆ.

ಭಾರತದಲ್ಲಿ ಕಳೆದ ಮೂರು ದಶಕಗಳಲ್ಲಿ ಕೃಷಿ ಸಂಶೋಧನೆ ಅಗಾಧ ಪ್ರಮಾಣದಲ್ಲಿ ಆಗಿದೆ. ಇದರಿಂದಾಗಿ ೧೯೫೦–೫೧ ರಲ್ಲಿ ಆಹಾರೋತ್ಪಾದನೆ ೫೧ ದಶಲಕ್ಷ ಟನ್ ಇದ್ದುದು ೧೯೮೩–೮೪ ರಲ್ಲಿ ೧೫೧ ದಶಲಕ್ಷ ಟನ್‌ಗಳಿಗೇರಿದೆ; ಅಂದರೆ ಸುಮಾರು ಮೂರು ಪಟ್ಟು ಹೆಚ್ಚಿದೆ. ಆಲೂಗಡ್ಡೆ, ಹತ್ತಿ, ಕಬ್ಬು, ಹಾಲು, ಕೋಳಿ ಇತ್ಯಾದಿಗಳಲ್ಲೂ ಇದೇ ಪ್ರಮಾಣದ ವೃದ್ಧಿಯಾಗಿದೆ. ಈ ಶತಮಾನದ ಕೊನೆಯ ಹೊತ್ತಿಗೆ

ಹಸಿದ ಹೊಟ್ಟೆಗಳನ್ನು ತಣಿಸಬೇಕಾದರೆ ೨೨೦ ದಶಲಕ್ಷ ಟನ್ ಆಹಾರೋತ್ಪಾದನೆ ಮಾಡಬೇಕಾಗುತ್ತದೆ

ಭಾರತದ ಒಟ್ಟು ಭೂಪ್ರದೇಶವಾದ ೩೨೮ ದಶಲಕ್ಷ ಹೆಕ್ಟೇರುಗಳಲ್ಲಿ ೧೭೫ ದಶಲಕ್ಷ ಹೆಕ್ಟೇರುಗಳು ಪರಿಸರದ ವೈಪರೀತ್ಯಗಳ ಹೊಡೆತಕ್ಕೆ ಸಿಕ್ಕಿರುವಾಗ ಹಸಿದ ಹೊಟ್ಟೆಗಳನ್ನು ತಣಿಸುವುದು ಇಪ್ಪತ್ತೊಂದನೆ ಶತಮಾನದ ಹೊತ್ತಿಗೆ ಸಾಧ್ಯವೆ? ಇದು ಸಾಧ್ಯವಾಗಬೇಕಾದರೆ ನಮ್ಮ ಶುಷ್ಕ ವಲಯದ, ಜೌಗು, ಕ್ಷಾರ, ಅರೆಶುಷ್ಕ, ಉಷ್ಣ ಹಾಗೂ ಶೀತ ಮರುಭೂಮಿಗಳ ಕಳಪೆ ಜಮೀನನ್ನು ಸಮರ್ಥವಾಗಿ ಬಳಸಿಕೊಳ್ಳಬೇಕಾಗಿದೆ. ವನವೃದ್ಧಿ, ನೀರು ಮತ್ತು ರಸಗೊಬ್ಬರಗಳ ಸಮರ್ಥ ಬಳಕೆ, ಸುಧಾರಿತ ಕೃಷಿ ಪದ್ಧತಿಗಳ ಅಳವಡಿಕೆ, ಬೆಳೆಪದ್ಧತಿಗಳ ಸುಧಾರಣೆ–ಇವೆಲ್ಲವನ್ನು ಕೈಗೊಳ್ಳಬೇಕಾಗಿದೆ.

ಇವೇನನ್ನು ಮಾಡದಿದ್ದರೂ ಕೊನೆಪಕ್ಷ ಇರುವ ಹಸಿರು ಸಂಪತ್ತನ್ನಾದರೂ ನಾವು ಉಳಿಸಿಕೊಳ್ಳಲು ಸಮರ್ಥರಾಗುತ್ತೇವೆಯೆ? ಫಲವತ್ತಾದ ಮೇಲ್ಮಣ್ಣು ರಚನೆಯಾಗಲು ೩ ಸಾವಿರದಿಂದ ೧೨ ಸಾವಿರ ವರ್ಷಗಳು ಹಿಡಿಯುತ್ತದೆ. ಈ ಮೇಲ್ಮಣ್ಣನ್ನು ಹಿಡಿದಿರುವ ಹಸಿರು ಹೊದಿಕೆ ಕಿತ್ತುಹೋದರೆ ಗಾಳಿ, ನೀರು, ಬಿಸಿಲಿನ ನೇರ ಹೊಡೆತದಿಂದಾಗಿ ಇದು ಬೇಗ ಹಾಳಾಗುತ್ತದೆ. ಕೆಲವೊಮ್ಮೆ ಗಂಟೆಗೆ ೧೫೦ ಟನ್ ಫಲವತ್ತಾದ ಮಣ್ಣು ಗಾಳಿ ಪಾಲಾಗುವುದೂ ಉಂಟು. ಮೇಲ್ಮಣ್ಣಿನ ದಪ್ಪ ಹೊದಿಕೆ ಮರ-ಗಿಡಗಳಿಂದಾಗುತ್ತದೆ. ಈ ಗಾಳಿಯ ಕೊರೆತವನ್ನು ಕೇವಲ ಮರ-ಗಿಡಗಳು ಮಾತ್ರ ತಡೆಯಬಲ್ಲವು. ಇಂಥ ಮರಗಿಡಗಳನ್ನು ಉರುವಲಗಾಗಿ, ಮರ-ಮುಟ್ಟುಗಳಿಗಾಗಿ ನಿರ್ದಯವಾಗಿ ಕಡಿದುಹಾಕುತ್ತಿದ್ದೇವೆ. ಇದು ಆತ್ಮಹತ್ಯೆಯ ಹಾದಿ, ವಿಶ್ವದ ಬಹುತೇಕ ಮರಳುಗಾಡು ಮರುಭೂಮಿಗಳು ಮಾನವನ ಕೊಡುಗೆಯೇ. ಉಷ್ಣವಲಯದ ಕಾಡುಗಳಲ್ಲಿ ಪ್ರತಿ ವರ್ಷ ೧೧೦ ಲಕ್ಷ ಹೆಕ್ಟೇರುಗಳಷ್ಟು ಕಾಡುಗಳು ಕಾಣೆಯಾಗುತ್ತಿವೆ. ಶುಷ್ಕ ಮತ್ತು ಅರೆಶುಷ್ಕ ಪ್ರದೇಶಗಳು ಹೀಗಾಗಿ ಮರಳುಗಾಡುಗಳಾಗುತ್ತಿವೆ. ಇದು ವಾಯುಮಾಲಿನ್ಯ, ಪ್ರಾಕೃತಿಕ ಅಸಮತೋಲನಕ್ಕೆ ದಾರಿ ಮಾಡಿಕೊಡುತ್ತದೆ. ಈ ರೀತಿ ಕಟಾವಾದ ವನಸಂಪತ್ತು ಬಹುಪಾಲು ಒಲೆಗಳಲ್ಲಿ ಉರುವಲಾಗಿ ಬೂದಿಯಾಗುತ್ತದೆ. ಅಭಿವೃದ್ಧಿಶೀಲ ದೇಶಗಳ ೧೦ ಕೋಟಿ ಜನತೆಗೆ ಉರುವಲಿನ ಕೊರತೆಯಿದೆ. ಸುಮಾರು ೧೦೦ ಕೋಟಿ ಜನ ಕಾಡನ್ನು ಕಡಿದು ಉರುವಲು ಪಡೆಯುತ್ತಾರೆ. ಇಂಧನ ಬದಲಿ ವ್ಯವಸ್ಥೆಯಾಗದಿದ್ದರೆ ೨೦೦೦ ಇಸ್ವಿ ಹೊತ್ತಿಗೆ ೨೪೦ ಕೋಟಿ ಜನತೆಗೆ ಉರುವಲಿನ ಸಮಸ್ಯೆ ಪೆಡಂಭೂತವಾಗುತ್ತದೆ.

ಏಷ್ಯ ದೇಶಗಳಲ್ಲಿ ವಿಶೇಷವಾಗಿ ಭಾರತ ಮತ್ತು ಪಾಕಿಸ್ತಾನಗಳಲ್ಲಿ ಇಂಧನದ ಕೊರತೆ ಅಪಾರ. ಉರುವಲಿನ ಸಮಸ್ಯೆ ನೀಗಲು ಬೇರೆ ಶಕ್ತಿ ಮೂಲಗಳನ್ನು ಬಳಸಿಕೊಳ್ಳಬೇಕಾಗುತ್ತದೆ.



ವಿಶ್ವದಲ್ಲಿ ಪ್ರತಿ ವರ್ಷ ೧೧ ದಶಲಕ್ಷ ಹೆಕ್ಟೇರುಗಳ ಕಾಡು ಹಾಳಾಗುತ್ತಿದೆ. ಭಾರತದಲ್ಲಿ ೯೦ ದಶಲಕ್ಷ ಹೆಕ್ಟೇರು ಭೂಮಿ ಕೇವಲ ನೀರಿನ ಹೊಡೆತಕ್ಕೆ ಸಿಕ್ಕಿ ಸವಕಳಾಗುತ್ತಿದೆ.

ಇಪ್ಪತ್ತೊಂದನೆ ಶತಮಾನದ ಹೊಸ್ತಿಲಲ್ಲಿ ಹಸಿವೆ ಹಾಗೂ ನ್ಯೂನ ಪೋಷಣೆಯಿಂದ ಬಳಲುತ್ತಾ ನಿಂತಿರುವ ವಿಶ್ವದ ೧೫೦ ದಶಲಕ್ಷಕ್ಕೂ ಹೆಚ್ಚಿನ ಜನರಿಗೆ ಅನ್ನ ನೀಡಲು ಸುಧಾರಿತ ಕೃಷಿಯ ಜೊತೆ ವನವೃದ್ಧಿಯನ್ನು ಕೈಗೊಳ್ಳಬೇಕು. ಪ್ರಧಾನ ಮಂತ್ರಿ ಶ್ರೀ ರಾಜೀವ್ ಗಾಂಧಿಯವರು ಪ್ರತಿ ವರ್ಷವೂ ೫೦ ದಶಲಕ್ಷ ಹೆಕ್ಟೇರು ಭೂಮಿಯಲ್ಲಿ ಗಿಡ ನೆಡುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದಾರೆ. ಇದಕ್ಕಾಗಿ ಪ್ರತ್ಯೇಕ ಸಚಿವಾಲಯವೇ ರೂಪುಗೊಂಡಿದೆ.

ಭೂಮಿಯ ಮೇಲೆ ಇಂದು ⅕ ಭಾಗ ಕಾಡು ಉಳಿದಿದೆ; ಇದು ೨೦೦ ಕೋಟಿ ಜನರಿಗೆ ಜೀವನಾಧಾರ. ಧನ, ಧಾನ್ಯ, ಸಂಪತ್ತಿನ ಜನನಿಯಾದ ವನಸಂಪತ್ತನ್ನು ನಾವೆಲ್ಲರೂ ಉಳಿಸಿ, ಬೆಳೆಸಬೇಕು. ಕಾಶ್ಮೀರದ ಸಂತ ಕವಿ ಶೇಖ್ ನೂರುದ್ದೀನ್ ವಲಿ ಹೇಳುವಂತೆ "ವನವಿರುವ ತನಕ ಅನ್ನ" ಆದ್ದರಿಂದ ಅನ್ನದಾತೆಯಾದ ವನದೇವಿಯನ್ನೂ, ಭೂಮಿತಾಯಿಯನ್ನೂ ವೀರಯೋಧರಂತೆ ನಾವೆಲ್ಲಾ ಸಂರಕ್ಷಿಸುವ ಪಣ ತೊಡೋಣ. [ಐ ಸಿ ಎ ಆರ್.]

## ಅಧಿಕ ಹಾಲಿನ ಉತ್ಪಾದನೆಗಾಗಿ ಕರಾವಿನ ರಾಸುಗಳಿಗೆ ಸಮತೋಲನ ಆಹಾರ ನೀಡಿ

ಸಂಕರ ತಳಿಯ ಹಸು-ಎಮ್ಮೆಗಳನ್ನು ಸಾಕುವವರು ಹಸಿರು ಮೇವು, ಭೂಸ, ಹಿಂಡಿ ಇತ್ಯಾದಿ ತಿನಿಸನ್ನು ರಾಸುಗಳಿಗೆ ಕೊಡುವುದು ಸರಿಯೇ. ಇಷ್ಟರಿಂದಲೇ ಕರಾವಿನ ಹಸುಗಳಿಗೆ ಬೇಕಾದ ಎಲ್ಲ ಪೋಷಕಾಂಶಗಳೂ, ವಿಟಮಿನ್‌ಗಳೂ ಸಿಗುತ್ತವೆಂದು ತಿಳಿಯುವುದು ತಪ್ಪು.

ಬಹುಷ್ಟು ಸಂಕರ ತಳಿಯ ರಾಸುಗಳಿಗೆ ಪ್ರೋಟೀನ್ ಕೊರತೆ ಆಹಾರದಲ್ಲಿ ಇರುವುದು ಅಧ್ಯಯನಗಳಿಂದ ಕಂಡುಬಂದಿದೆ. ಪ್ರೋಟೀನ್ ಅಂಶ ಅತ್ಯಂತ ಮಹತ್ವದ ಪೋಷಕಾಂಶ. ಇದರಿಂದ ಹಾಲಿನ ಉತ್ಪಾದನೆ ಹೆಚ್ಚುತ್ತದೆ. ಆದ್ದರಿಂದ ಪಶುಪಾಲಕರು ತಮ್ಮ ಕರಾವಿನ ರಾಸುಗಳಿಗೆ ಹೆಚ್ಚು ಹೆಚ್ಚು ಪ್ರೋಟೀನ್ ಸಂಪನ್ನ ಮೇವನ್ನು ನೀಡಬೇಕಾಗುತ್ತದೆ.

ಖನಿಜ, ಲವಣ ಮತ್ತು ವಿಟಮಿನ್‌ಗಳನ್ನು ಮೇವಿನಲ್ಲಿ ರಾಸುಗಳಿಗೆ ನೀಡಬೇಕಾಗುತ್ತದೆ. ಈ ಅಂಶಗಳು ಕೊಡುವ ಮೇವು, ತಿನಿಸು ಹಾಗೂ ಇವುಗಳ ಗುಣಮಟ್ಟವನ್ನವಲಂಬಿಸಿದೆ.

ಹಸಿರು ಮೇವಿನ ಅಭಾವದಲ್ಲಿ ಕರಾವಿಗೆ ರಾಸುಗಳಿಗೆ ಒಣ ಮೇವು ನೀಡುವುದು ಅನಿವಾರ್ಯವಾದಾಗ ಪ್ರತಿ ಹಸು/ಎಮ್ಮೆಗೂ ೨೦ ೦೦೦ ರಿಂದ ೩೦,೦೦೦ ಅಂತಾರಾಷ್ಟ್ರೀಯ ಘಟಕಗಳಷ್ಟು ವಿಟಮಿನ್ ಪೂರೈಸಬೇಕಾಗುತ್ತದೆ. ಇದರಿಂದ ರಾಸುಗಳು ಆರೋಗ್ಯವಾಗಿರುತ್ತವೆ.

ಕರಾವಿನ ರಾಸುಗಳಿಗೆ ಸಾಕಷ್ಟು ಶುದ್ಧ ನೀರನ್ನು ಪೂರೈಸಬೇಕೆಂಬುದನ್ನು ಪಶುಪಾಲಕರು ಗಮನದಲ್ಲಿರಿಸಬೇಕು. ನೀರಿನ ಆವಶ್ಯಕತೆ ಋತು, ಮೇವು ಹಾಗೂ ಕೊಡುವ ತಿನಿಸನ್ನು ಅವಲಂಬಿಸಿದೆ. ಸಾಮಾನ್ಯವಾಗಿ ಒಂದು ಕಿಲೋ ಒಣಮೇವಿಗೆ ೨-೫ ಕಿಲೋ ನೀರು ಕೊಡಬೇಕಾಗುತ್ತದೆ. ಒಣಮೇವು ನೀಡುವಾಗ ಹೆಚ್ಚು ನೀರಿನ ಆವಶ್ಯಕತೆಯಿರುತ್ತದೆ. ಪ್ರತಿ ಒಂದು ಕಿಲೋ ಅಧಿಕ ಹಾಲಿನ ಉತ್ಪಾದನೆಗೆ ಕನಿಷ್ಠ ಒಂದು ಕಿಲೋ ಅಧಿಕ ನೀರನ್ನು ಕೊಡಬೇಕಾಗುತ್ತದೆ. ಆದ್ದರಿಂದ ಕರಾವಿನ ರಾಸುಗಳಿಗೆ ಅವುಗಳ ಇಚ್ಛಾನುಸಾರ ಶುದ್ಧ ನೀರನ್ನು ಕುಡಿಸಬೇಕು.

[ಐ ಸಿ ಎ ಆರ್.]

## ನಮಿಸು ಬಾ

—ಎಂ. ಎ. ನೀಲಾಂಬಿಕಾ, ಎಂ.ಎ.,ಬಿ.ಎಡ್.,
242, ಉತ್ತರಾದಿ ಮಠದ ರಸ್ತೆ, ಮೈಸೂರು-510004.

ಅದೋ ನೋಡು ಬರುತಲಿದೆ ವಾತ್ಸಲ್ಯ ಮೂರ್ತಿಯು
ಸಿದ್ಧ ಪುರುಷರ ನಾಡಿಂ ಜನರ ಕಡೆಗೆ, ಬುವಿಯು
ಸ್ವರ್ಗವ ಮಾಡೆ ಪತಿತರನ್ನುದ್ಧರಿಸೆ, ತಾ
ಪಣತೊಟ್ಟು ಬಂದಿಲ್ಲಿ ನಿಂದಿಹುದು ನೋಡು,
ಮಮತೆಯಿಂದೆಲ್ಲೆಡೆ ಕರುಣೆದೃಷ್ಟಿಯ ಬೀರಿ,
ಕೋಟ್ಯಾಂತ ಜೀವಿಗಳ ಮನಕೆ ನೆಮ್ಮದಿ ತಂದು,
ದಾನವತೆ ಕೊನೆಗೊಳಿಸಿ, ಮಾನವತೆಯನ್ನುಳಿಸಿ,
ಜಾತಿ ಮತ ಭೇದಗಳ ಸಂಕಲೆಯು ಕಿತ್ತೊಗೆದು,
ಸುಜ್ಞಾನ ದೀಪ್ತಿಯನು ಎಲ್ಲೆಡೆ ಪಸರಿಸುತ,
ಶಾಂತಿ ಮಂತ್ರವ ಜಗಕೆ ಸಾರುತಿರೆ ಕೇಳು ಬಾ !
ವಿಶ್ವದಾದ್ಯಂತದಲಿ ಇರುವ ಚೇತನ ಒಂದೆ,
ಅದಕೆ ನಮಿಸುತ ನೀವು ನೆಮ್ಮದಿಯ ಪಡೆಯಿರಿ,
ಎಂದು ಸಾರುತಲಿರುವ ದಿವ್ಯಚೇತನಕೀಗ,
ತಲೆಬಾಗಿ ನಮಿಸಲು ಬೇಗ ಬಾ ಮನುಜ.



## ಚದುರಂಗ

—ಪಿ. ರಾಮಕೃಷ್ಣಶಾಸ್ತ್ರಿ
"ಶಿವಶಕ್ತಿ ನಿಲಯ", ಅಂಚೆ, ಮುಚ್ಚಿನ-574295 (ದ.ಕ.)

ಸುಮಾರು ೫ ಸಾವಿರ ವರ್ಷಗಳ ಹಿಂದಿನಿಂದಲೇ ಭಾರತದ ರಾಜಮಹಾರಾಜರು ಬಿಡುವಿನ ಸಮಯದಲ್ಲಿ ಹುಕ್ಕಾ ಸೇವನೆ ಮಾಡುತ್ತಾ ಆಡುತ್ತಿದ್ದ ವಿನೋದ ಕ್ರೀಡೆಗಳಲ್ಲಿ ಚದುರಂಗವೂ ಒಂದಾಗಿತ್ತು. ಚದುರಂಗವೆಂದರೆ ನಾಲ್ವರ ಗುಂಪು ಎಂದೇ ಅರ್ಥ. ತಲಾ ನಾಲ್ಕರಂತಿರುವ ಆನೆ, ಕುದುರೆ, ರಥ ಮತ್ತು ಕಾಲಾಳುಗಳ ಈ ಆಟ ೬೪ ಮನೆಗಳ ಚದುರಂಗ ಪಟದ ಮೇಲೆ ನಡೆಯುತ್ತದೆ. ದೇವಾಲಯಗಳಲ್ಲಿ ಪರ್ವದಿನಗಳಂದು ಜಾಗರಣೆ ನಡೆಸಬೇಕಾದ ಭಕ್ತಾದಿಗಳು ಇದನ್ನು ಕಂಡುಹಿಡಿದರೆಂದೂ ಹೇಳಿಕೆಯಿದೆ. ದಶಮಾಂಶ ಮತ್ತು ಅರಾಬಿಕ್ ಸಂಖ್ಯೆಗಳನ್ನು ಜಗತ್ತಿಗೆ ಕೊಡುಗೆಯಾಗಿ ನೀಡಿದ ಭಾರತವೇ ಚದುರಂಗವನ್ನು ಸೃಜಿಸಿತೆಂಬುದು ನಿರ್ವಿವಾದ.

ಚದುರಂಗ ಎಂದು ಉಗಮವಾಯಿತೋ ಹೇಳುವಂತಿಲ್ಲ. ಆದರೆ ಪ್ರಾಚೀನ ಸಂಸ್ಕೃತ, ಪಾಳಿ, ಪ್ರಾಕೃತ ಭಾಷೆಗಳಲ್ಲಿ ಅದರ ಬಗೆಗೆ ಶಬ್ದಪ್ರಯೋಗಗಳಿವೆ. ೮×೮ ಚದರ ಅಳತೆಯ ಚದುರಂಗದ, ಹಲಗೆಯನ್ನು ಕ್ರಿ.ಶ. ನೂರರ ಸುಮಾರಿನ ಒಂದು ಬೌದ್ಧಗ್ರಂಥದಲ್ಲಿ ಅಷ್ಟಪದವೆಂದು ಉಲ್ಲೇಖಿಸಲಾಗಿದೆ. ಬೌದ್ಧರು ಈ ಆಟದ ಜನಕರೆಂದೂ ಯುದ್ಧದಲ್ಲಿ ಸ್ವಜನ ಹತ್ಯೆ ಅವರ ದೃಷ್ಟಿಯಲ್ಲಿ ಪಾತಕವಾದುದರಿಂದ ಯುದ್ಧರಂಗದ ಪ್ರತೀಕವಾಗಿ ಈ ಹಲಗೆಯನ್ನು ಸೃಷ್ಟಿಸಿ ಯುದ್ಧದ ಪ್ರತಿಕೃತಿಯಾದ ಈ ಆಟವನ್ನು ಸೃಷ್ಟಿಸಿದರೆಂಬ ಹೇಳಿಕೆಯಿದೆ. ರಾಮಾಯಣದಲ್ಲೂ ಅಷ್ಟಪದದ ಬಗ್ಗೆ ಹೇಳಲಾಗಿದೆ. ಕಾರ್ತಿಕ ಮಾಸದ ಮೊದಲ ದಿನ ಈ ಧಾರ್ಮಿಕ ಕ್ರೀಡೆಯನ್ನು ಆಡುವುದು ಸಂಪ್ರದಾಯವಾಗಿತ್ತು. ರಾಮನು ಲಂಕೆಯನ್ನು ಮುತ್ತಿದಾಗ ರಾವಣನ ರಾಣಿ ಮಂಡೋದರಿ ಕಂಡುಹಿಡಿದ ಆಟ ಇದೆಂದೂ ಭವಿಷ್ಯ ಪುರಾಣದಲ್ಲಿದೆ.

ಬೌದ್ಧರು ಮತ್ತು ವಿಪ್ರರು ಚದುರಂಗವಾಡಬಾರದೆಂಬ ನಿಷೇಧವಿತ್ತು. 'ಆಡಬಾರದು ಚೆನ್ನೆ, ನೋಡಬಾರದು ಪಗಡೆ, ಆಡಿದರೆ ಆಡಬಹುದೊಂದಾಟ ಚದುರಂಗ' ಎಂದು ಪ್ರಾಜ್ಞರು ಹೇಳುತ್ತಿದ್ದರು. ಹರಿವಂಶ ಪುರಾಣದಲ್ಲಿ ರುಕ್ಮಿಯು ಕೆಂಪು ದಾಳಗಳನ್ನು ಬಲರಾಮನು ಕಪ್ಪು ದಾಳಗಳನ್ನು ಬಳಸಿ ಚದುರಂಗವಾಡಿದರಂತೆ. ಆಟ ವಿಪರೀತಕ್ಕೆ ಹೋದಾಗ ಸಭಾಸ್ಥಾನದ ಚಿನ್ನದ ಕಂಬದಿಂದ ಬಲರಾಮನು ರುಕ್ಮಿಯನ್ನು ಹೊಡೆದನೆಂಬುದು ಈ ವಿಧಿ ನಿಷೇಧಗಳಿಗೆ ಕಾರಣವಾಗಿದ್ದಿರಲೂಬಹುದು.

ಕ್ರಿ.ಶ. ೬೦೦ರ ಜೈನ ಸಾಹಿತ್ಯದಲ್ಲಿ ಅಷ್ಟಪದವನ್ನು 'ಅತ್ತಾವಯ' ಎಂದು ಕರೆದು, ಪಗಡೆಯಾಟದಿಂದ ಸೋಲುವ ಬದಲು ಜಾಣೆ ತರುಣಿಯೊಬ್ಬಳು ಚದುರಂಗ ದಿಂದ ರಾಜನ ಮನ ಅಂಳಿಸಿದ ಸ್ವಾರಸ್ಯಕರ ಕತೆಯಿದೆ. ಆದರೂ ಚದುರಂಗ ಭಾರತ ದಲ್ಲೇ ಹುಟ್ಟಿತೆನ್ನುವುದನ್ನು ಎಲ್ಲರೂ ಒಪ್ಪುವುದಿಲ್ಲ. ರಣರಂಗದಲ್ಲಿ ಸೈನಿಕರ ವಿರಾಮ ಕಾಲದ ವಿನೋದಕ್ಕಾಗಿ ಚಾಂಗ್ ಕೀ ಎಂಬ ಈ ಆಟವನ್ನು ಹೆನ್ ಸಿಂಗ್‌ನೆಂಬ ಚೀನೀ ಸೇನಾಧಾವಿ ಕಂಡುಹಿಡಿದ ಎನ್ನುತ್ತಾರೆ ಚೀನೀಯರು. ಬ್ಲಾಡ್ ಎಂಬ ಸಂಶೋಧಕನ ಗ್ರಂಥದಲ್ಲಿ ಅದು ಪರ್ಷಿಯದಲ್ಲಿ ಜನಿಸಿ ವ್ಯಾಪಾರಿಗಳ ಮೂಲಕ ಭಾರತಕ್ಕೆ ಬಂದಿತೆಂಬ ವಾದವಿದೆ.

ಆಕ್ಸ್‌ಫರ್ಡಿನ ವಿದ್ವಾಂಸ ಡಾ|| ಹೈಡ್‌ಸರ್ ವಿಲಿಯಂ ಜೋನ್ಸ್ ಸಂಸ್ಕೃತ ಗ್ರಂಥಗಳನ್ನು ಅಧ್ಯಯನ ಮಾಡಿ ೧೭೮೫ರಲ್ಲಿ ಏಷ್ಯಾಟಿಕ್ ರಿಸರ್ಚ್ ಪ್ರಕಟಣೆಯಲ್ಲಿ ಭಾರತವೇ ಚದುರಂಗದ ತವರೂರೆಂಬುದು ನಿಸ್ಸಂಶಯವೆಂದಿದ್ದಾರೆ. ಕ್ರಿ.ಶ. ೬ನೆಯ ಶತಮಾನದಲ್ಲಿ (೫೫೦ರ ಸುಮಾರಿಗೆ) ಪಾರಸಿ ವರ್ತಕರು ಈ ಆಟವನ್ನು ಪರ್ಷಿಯಕ್ಕೆ ತೆಗೆದುಕೊಂಡು ಹೋಗಿ 'ಚದುರಂಗ'ವೆಂಬ ಹೆಸರನ್ನು 'ಶತ್‌ರಂಜ'ನೆಂದು ಬದ ಲಾಯಿಸಿದರಂತೆ.

ಕ್ರಿ.ಶ. ೧೧೦೦ರಲ್ಲಿ ಚಾಲುಕ್ಯ ಚಕ್ರವರ್ತಿ ಸೋಮೇಶ್ವರನು ಪಡೆಸಿದ ಸಾಹಿತ್ಯ ಕೃತಿಗಳ ಸಂಗ್ರಹದಲ್ಲಿ ಸಾಕಷ್ಟು ಚದುರಂಗದ ಉಲ್ಲೇಖಗಳಿವೆ. ಪಂಡಿತ ತಿರು ವೆಂಕಟಾಚಾರ್ಯರು ವಿಲಾಸಮಣಿ ಮಂಜರಿ ಗ್ರಂಥದಲ್ಲಿ ಅದರ ಕುರಿತು ನೂರಕ್ಕಿಂತ ಹೆಚ್ಚು ಪ್ರಶ್ನೆಗಳಿಗೆ ಉತ್ತರಗಳನ್ನಿತ್ತು ಈ ಆಟದಲ್ಲಿ ನಿಷ್ಣಾತರಾದ ವೇಶ್ವ ಬಾಜೀ ರಾಯನ ಬಗೆಗೆ ಕೊಂಡಾಡಿದ್ದಾರೆ.

ಸಂಸ್ಕೃತ ಭಾಷೆಯಲ್ಲಿ ೧೫ನೆಯ ಶತಮಾನದಲ್ಲಿ ಶ್ರೇಷ್ಠ ಬಂಗಾಲಿ ಪಂಡಿತ ಶುಲ್ಪನಿ ರಚಿಸಿದ 'ಚದುರಂಗ ದೀಪಿಕಾ' ಗ್ರಂಥದಲ್ಲಿ ಈ ಆಟದ ನಿಯಮಗಳ ಕುರಿತು ವಿವರಗಳಿವೆ. ಇಂದ್ರ, ಯುಧಿಷ್ಠಿರ, ನಾರದರಿಗೆ ಅನ್ಯೋನ್ಯ ಬಾಂಧವ್ಯವಿರುವ ಚದುರಂಗ ಮಾನವನ ಸರ್ವತೋಮುಖ ಅಭಿವೃದ್ಧಿಗೆ ಅವಶ್ಯವೆಂದಿದ್ದಾನೆ ಶುಲ್ಪನಿ. ಆದರೆ ಆನೆ, ಕುದುರೆ, ರಾಜರೊಂದಿಗೆ ರಥದ ಬದಲು ದೋಣಿಗಳೆಂಬ ನಾಲ್ಕು ಕಾಯಿ ಗಳನ್ನು ಬಳಸಿ, ನಾಲ್ಕು ಜನರನ್ನು ಕೂಡಿಕೊಂಡು ಆಡುವ, ಕೆಂಪು, ಹಸಿರು, ಹಳದಿ, ಕಪ್ಪು ಕಾಯಿಗಳಿರುವ ಚದುರಂಗದ ಆಟ ಬಂಗಾಳಕ್ಕೆ ಮಾತ್ರ ಸೀಮಿತ ವಾಗಿತ್ತೋ ಇತರೆಡೆಯಲ್ಲೂ ಪಂಚಿತವಾಗಿತ್ತೋ ತಿಳಿಯದು.

ಯುದ್ಧದ ಪ್ರತಿರೂಪವಾದ ಚದುರಂಗದಾಟ ರಾಜರೊಳಗೆ ನಡೆಯುತ್ತಿದ್ದ ಕಾರಣ 'ರಾಜಕ್ರೀಡೆ' ಎಂಬ ಅಭಿದಾನ ಪಡೆದಿತ್ತು. ಒಬ್ಬ ರಾಜನಿಗೆ ಇಬ್ಬರು ಆಟ



ಗಾರರನ್ನು ಹೊಂದುವ ಅಧಿಕಾರವಿತ್ತು. ಇದರಲ್ಲಿ ಹಣವನ್ನಲ್ಲದೆ ಅಮೂಲ್ಯ ರತ್ನಾದಿ ಗಳನ್ನು ಪಣವೊಡ್ಡುತ್ತಿದ್ದರು. ಸೋತವನು ತನ್ನ ಒಂದೊಂದು ಅಂಗವನ್ನು ಪಣ ವೊಡ್ಡಿ, ಸೋತರೆ ಹರಿತವಾದ ಖಡ್ಗದಿಂದ ಆ ಅಂಗವನ್ನು ಕತ್ತರಿಸಿ ಕೊಡಬೇಕಾಗಿತ್ತು. ಆಟ ನಡೆಯುವ ಸ್ಥಳದಲ್ಲಿ ಅಗ್ಗಿಷ್ಟಿಕೆಯ ಬೆಂಕಿಯಲ್ಲಿ ಇರಿಸಿದ ತಾಮ್ರದ ಪಾತ್ರೆ ಯೊಳಗೆ ಕುದಿಯುತ್ತಿರುವ ಕೆಂಪು ದ್ರಾವಕವನ್ನು ಆ ಗಾಯಕ್ಕೆ ಲೇಪಿಸುತ್ತಿದ್ದರು. ಸ್ವಲ್ಪ ಹೊತ್ತಿನಲ್ಲಿ ಗಾಯ ಮಾಯುತ್ತಿತ್ತು. ಆತ ಮತ್ತೆ ಆಟಕ್ಕೆ ಸಿದ್ಧನಾಗಿ ತನ್ನ ಇನ್ನೊಂದು ಅಂಗವನ್ನು ಪಣವಾಗಿ ಒಡ್ಡುತ್ತಿದ್ದುದನ್ನು ಭಾರತದಲ್ಲಿ ಅರೇಬಿಯಾದ ಇತಿ ಹಾಸಕಾರ ಅಲ್‌ಮುಸೂದಿ ಕ್ರಿ.ಶ. ೯೫೦ರ ದಾಖಲೆಗಳಲ್ಲಿ ಉಲ್ಲೇಖಿಸಿದ್ದಾನೆ.

ಮೊಹೆಂಜೊದಾರೊದಲ್ಲಿ ನಡೆಸಿದ ಉತ್ಖನನಗಳಲ್ಲಿ ಸುಂದರವಾದ ಚದುರಂಗದ ಕಾಯಿಗಳು ಸಿಕ್ಕಿವೆ. ಅವುಗಳನ್ನು ಭಾರತದ ಕುಶಲಕರ್ಮಿಗಳು ಕಲಾತ್ಮಕವಾಗಿ ನಿರ್ಮಿಸು ತ್ತಿದ್ದರೆಂದೂ ಇದಕ್ಕೆ ಅಧಿಕವಾಗಿ ಆನೆಯ ದಂತವನ್ನು ಬಳಸುತ್ತಿದ್ದರೆಂದೂ ಅಲ್ ಮುಸೂದಿ ಬರೆದಿದ್ದಾನೆ. ಪ್ರಾಣಾಕೃತಿಯ ಚದುರಂಗ ಕಾಯಿಗಳನ್ನು ಬಳಸುವುದಕ ವಿರುದ್ಧ ಸಾಮಾಜಿಕ, ಧಾರ್ಮಿಕ ನಿಷೇಧಗಳೂ ಇದ್ದುವೆಂದು ಆತ ಹೇಳಿದ್ದಾನೆ.

ಆರನೆಯ ಶತಮಾನದ ಪರ್ಷಿಯನ್ ಪ್ರಣಯ ಕಾವ್ಯಗಳಲ್ಲಿ ಚದುರಂಗದ ಮೊದಲ ವರ್ಣನೆ ಬರುತ್ತದೆ. ಕ್ರಿ.ಶ. ೬೫೦ರಲ್ಲಿ ಅರಬ್ ಆಕ್ರಮಣಕಾರರೂ ಅದನ್ನು ಪರ್ಷಿಯದಿಂದ ಅರಬ್ ದೇಶಕ್ಕೊಯ್ದು ಮೇಲೆ ಅದು ಯುರೋಪಿನ ನಾನಾ ಭಾಗ ಗಳಿಗೆ ಪ್ರಚಾರವಾಯಿತು. ಈಗ ಚದುರಂಗದಲ್ಲಿ ಎದುರಾಳಿ ರಾಜನನ್ನು ಹೊಡೆದಾಗ ಬಳಸುವ 'ಚೆಕ್‌ಮೇಟ್' ಎಂಬ ಪದ ಪರ್ಷಿಯನ್ ಪದ 'ಷಾಮತ್'ನ ರೂಪಾಂತರ. ಹಾಗೆಂದರೆ ಪ್ರಾಣಬಿಟ್ಟನೆಂದು ಅರ್ಥ. ಅರೇಬಿಯ ದೇಶದಲ್ಲಿ ಚದುರಂಗದ ಪ್ರಸಿದ್ಧ ಆಟಗಾರರು ಅನೇಕರಿದ್ದರು. ಭಾರತದಿಂದ ಬಂದ ಜಾಣನೊಬ್ಬ ರಾಣಿಗೆ ಅವಳ ಮಗ ಸತ್ತುದನ್ನು ಪರೋಕ್ಷವಾಗಿ ತಿಳಿಸಲು ಈ ಆಟವನ್ನು ಉಪಯೋಗಿಸಿ, ಆಟದಲ್ಲಿ ತಾನು ಗೆದ್ದಾಗ ಷಾಮತ್ ಎಂದನಂತೆ. ಅದರಿಂದ ರಾಣಿಗೆ ತನ್ನ ಮಗ ಸತ್ತನೆಂದು ತಿಳಿಯಿತಂತೆ. ೧೧ನೆಯ ಶತಮಾನದಲ್ಲಿ ಅರೇಬಿಯದಿಂದ ಪ್ರಸಿದ್ಧ ಆಟಗಾರ ಅಲ್ಬೆ ರೂನಿ ಭಾರತಕ್ಕೆ ಬಂದು, ನಾಲ್ವರು ಆಡುವ ಇಲ್ಲಿನ ಆಟವನ್ನು ಶ್ಲಾಘಿಸಿದ್ದಾನೆ. ಭಾರತದಲ್ಲಿ ಉಗಮ ಹೊಂದಿದ ಈ ಆಟ ಈಗ ಅಸ್ಸಾಮಿನಲ್ಲಿ ಬೊಯಿಟ್ರಂಗ್, ಚೀನಾದಲ್ಲಿ ಶ್ವಿಂಗ್‌ಪಿ, ಟಿಬೇಟಿನಲ್ಲಿ ಚಂದಾರತಿ, ಮಲಯದಲ್ಲಿ ಚಟೋರ್, ಜಪಾನಿ ನಲ್ಲಿ ಶೋಗಿ, ಬಹೆಟ್ರೈನಿನಲ್ಲಿ ಚಟ್ರಕಿಯಾನ್, ಬರ್ಮದಲ್ಲಿ ಸಿಟ್ಟ್ಯೂಯಿನ್ ಎಂದು ಹೆಸರಾಗಿದೆ.

ಮೊಗಲ್ ಸಾಮ್ರಾಟರು ವಿನೋದಕ್ಕಾಗಿ ಜೀವಂತ-ಮಾನವರನ್ನು ಬಳಸಿ ಚದು ರಂಗವಾಡುತ್ತಿದ್ದರು. ರಷ್ಯದ ಜಾಗತಿಕ ಪ್ರಶಸ್ತಿ ವಿಜೇತ ಆಟಗಾರ ಬೊಟ್‌ವಿನಿಕ್

ಒಮ್ಮೆ ಜೀವಂತ ಚದುರಂಗವನ್ನು ಏರ್ಪಡಿಸಿ, ಒಂದು ದೊಡ್ಡ ಕೋಣೆಯಲ್ಲಿ ೬೪ ಚದುರಂಗದ ಮನೆಗಳನ್ನು ನಿರ್ಮಿಸಿ ೩೨ ಆಟಗಾರರನ್ನು ನಿಲ್ಲಿಸಿ ಆಡಿಸಿದ. ತಿರುವೆಂಕಟಾಚಾರ್ಯನ ವಿಲಾಸಮಣಿ ಮಂಜರಿ ಗ್ರಂಥದಲ್ಲಿ ೧೦೦ ಮನೆಗಳಿರುವ 'ಮಹಾವಿಲಾಸ' ಎಂಬ ಚದುರಂಗದಾಟವೂ ಉಲ್ಲೇಖಿತವಾಗಿವೆ. ಇದನ್ನು ಕಾರ್ಯರೂಪಕ್ಕೆ ತರಲು ಕುಶಲ ಕ್ರೀಡಾಳುಗಳು ಯೋಚಿಸುತ್ತಿದ್ದಾರೆ. ಚದುರಂಗದ ಬಗೆಗೆ ಜಗತ್ತಿನಾದ್ಯಂತ ಸಾವಿರಾರು ಗ್ರಂಥಗಳು ಬರೆಯಲ್ಪಟ್ಟಿವೆ. ಜಗತ್ತಿನಲ್ಲಿ ಮೊದಲು ಮುದ್ರಿತವಾದ ಗ್ರಂಥ ಬೈಬಲ್, ಎರಡನೆಯದು ಚದುರಂಗದ ಬಗೆಗೆ ಬರೆದಂಥದು.

ಒಬ್ಬ ಆಟಗಾರನು ೪೦ ರಿಂದ ೬೦ ರಷ್ಟು ಆಟಗಾರರೊಂದಿಗೆ ಒಂದೇ ಸಲ ಆಡುವ ಕುರುಡು ಚದುರಂಗ ಎಂಬ ವಿಧಾನವಿದೆ. ಆಶ್ಚರ್ಯವೆಂದರೆ ಆತ ಒಂದು ಕೋಣೆಯಲ್ಲಿ ಒಬ್ಬನೇ ಇದ್ದು ಉಳಿದ ಆಟಗಾರರ ಪಟಗಳನ್ನಾಗಲಿ ಚಲನೆಯನ್ನಾಗಲೀ ನೋಡುವುದಿಲ್ಲ. ಚದುರಂಗದ ಸಂಕೇತಗಳ ಮೂಲಕ ಆಡುವ ಆಟವಿದು.

ಚದುರಂಗದ ಸಂಜ್ಞೆಗಳಿಗೆ ಭಾರತದಲ್ಲಿರುವ ಹೆಸರುಗಳು ವಿದೇಶಗಳಲ್ಲಿ ರೂಪಾಂತರ ಹೊಂದಿವೆ. ರಾಜನಿಗೆ ಪ್ರಧಾನ್, ವಜೀರ್, ಕುದುರೆಗೆ ನಾಯಿಟ್, ಆನೆಗೆ ರೊಕ್, ಕಾಲಾಳುವಿಗೆ ಪ್ಯಾನ್ಸ್, ಪಾದ್ರಿ ಎಂಬ ಹೆಸರುಗಳು ಕೆಲವೆಡೆ ಪ್ರಚಾರದಲ್ಲಿವೆ. ಇಂದು ಪ್ರಬುದ್ಧ ಶಾಸ್ತ್ರವಾಗಿರುವ ಚದುರಂಗದ ಕಾಯಿಲೆ ಭಾರತದಲ್ಲಿ ವಿದೇಶಗಳಲ್ಲಿ ಕಿಂಗ್, ಕ್ವೀನ್, ಬಿಷಪ್, ನಾಯಿಟ್, ರೊಕ್ಸ ಮತ್ತು ಪ್ಯಾನ್ಸ್ ಗಳೆಂಬ ಹೆಸರುಗೊಂಡಿವೆ.

ರಷ್ಯದಲ್ಲಿ ಚದುರಂಗ ಒಂದು ಜನಪ್ರಿಯ ಕ್ರೀಡೆ. ಪ್ರತಿಯೊಂದು ಶಾಲೆಗಳಲ್ಲೂ ಅದರ ಬಗೆಗೆ ತರಬೇತಿ ನೀಡುತ್ತಾರೆ. ಈ ಕ್ರೀಡೆಯ ಸಲುವಾಗಿಯೇ ಪ್ರಕಟವಾಗುವ ಪತ್ರಿಕೆಗಳಿವೆ. 200 ಕ್ಕಿಂತ ಹೆಚ್ಚು ದೈನಿಕಗಳಲ್ಲಿ ಚದುರಂಗ ಕ್ರೀಡಾ ಕಾಲಮ್ಮುಗಳಿವೆ. ಪಾಕಿಸ್ತಾನದ ಚಾದುಕಾನಗಳಲ್ಲಿ ಗಿರಾಕಿಗಳಿಗೆ ಚದುರಂಗ ಕ್ರೀಡೆಗೆ ಅವಕಾಶವಿದೆ. ಧೂಮಪಾನ ಚಟ ಬಿಡಲು ಏಕೈಕ ಉಪಾಯ ಚದುರಂಗ ಎನ್ನುತ್ತಾರೆ ವಿಜ್ಞಾನಿಗಳು.

ಅಂತಾರಾಷ್ಟ್ರೀಯ ಮಟ್ಟದಲ್ಲಿ ಚದುರಂಗ ಸ್ಪರ್ಧೆ ಮೊದಲು ನಡೆದುದು ೧೮೫೧ರಲ್ಲಿ ಲಂಡನಿನಲ್ಲಿ. ಜಾಗತಿಕ ಸ್ಪರ್ಧೆ ಆರಂಭವಾದುದು ೧೮೮೬ರಲ್ಲಿ. ಈಗ ಇಂಟರ್ ನ್ಯಾಷನಲ್ ಜಾಗತಿಕ ಸ್ಪರ್ಧೆಗಳ ಗೊತ್ತುಗುರಿಗಳನ್ನು ನಿರ್ಣಯಿಸುವುದು. ವಿಶ್ವ ಸ್ಪರ್ಧೆಯಲ್ಲಿ ರಷ್ಯದ ಆಟಗಾರರು ಪ್ರಭುತ್ವ ಸ್ಥಾಪಿಸಿ, ೧೯೭೩ರ ವರೆಗೆ ೨೫ ಸಲ ಗೆದ್ದುದು ಅವರ ಸಾಹಸಕ್ಕೊಂದು ಹೆಗ್ಗುರುತು. ಜರ್ಮನಿಯ ಡಾ|| ಲಾಸ್ಕರ್, ರಷ್ಯದ ಡಾ|| ಆಲೇಖಿನ್, ಕ್ಯೂಬಾದ ಕಾಪಾಬ್ಲಾಂಕಾ, ಹಾಲಂಡಿನ ಡಾ| ಯುವೆ, ಭಾರತದ



ಸುಲ್ತಾನ್‌ಖಾನ್ ಈ ಶತಮಾನದ ಶ್ರೇಷ್ಠ ಆಟಗಾರರು. ಜಾಗತಿಕ ಪಂದ್ಯದಲ್ಲಿ ಸೋತವರಿಗೂ ಗೆದ್ದವರಿಗೂ ಭಾರೀ ಸಂಭಾವನೆ ಸಿಗುವುದು.

ಜರ್ಮನಿಯ ಪುಟ್ಟಹಳ್ಳಿ ಸೇಂಟ್ ಸ್ಟ್ರೋಬೆಕ್. ಇಲ್ಲಿ ೯ ವರ್ಷದ ಮಕ್ಕಳಿಂದಾರಂಭಿಸಿ ಮುದುಕರ ವರೆಗೆ ಚದುರಂಗ ರಕ್ತಗತ. ಶಾಲೆಗಳಲ್ಲೂ ಅದರ ಕಲಿಕೆ ಕಡ್ಡಾಯ. ಹಬ್ಬ, ಜಾತ್ರೆಗಳಲ್ಲೆಲ್ಲ ಚದುರಂಗ ಸ್ಪರ್ಧೆಗೆ ಆದ್ಯತೆ. ವಿದೇಶಗಳ ಪರಿಣತರೂ ಇದಕ್ಕಾಗಿ ಬರುತ್ತಾರೆ. ಚದುರಂಗದ ಹಾಸು, ಕಾಯಿಗಳು ನಿರುಪಯುಕ್ತವಾದರೆ ಇವರು ವಿಧಿಯುಕ್ತ ಸಮಾಧಿ ಮಾಡುತ್ತಾರೆ. ಆದರೆ ಈ ಹಳ್ಳಿಗರು ತಾವು ಅಸಾಮಾನ್ಯ ಆಟಗಾರರೆಂದೇ ಅರಿತು ಕೊಂಡಿಲ್ಲ.

---

## ವಚನ ವಾಹಿನಿ

—ಪ್ರೊ. ಸಂಗಮೇಶ ಹಂಡಿಗಿ, ಎಂ.ಎ.,ಡಿ.ಪಿ.ಎ.
ಗೌ|| ಸಂಪಾದಕರು, 'ಮಾವಿಡಿ' ತ್ರೈಮಾಸಿಕ, ಕಸಬಾ ಚಾವಡಿ ಹತ್ತಿರ, ನವಿಲುಗುಂದ582208

### ಅಧಿಕಾರದ ಅಮಲು

ಅಧಿಕಾರಕ್ಕಾಗಿ ಹಂಬಲಿಸುವ ಕುಟಿಲ ಕುತಂತ್ರಗಳಿಗೆ
ಅಪ್ಪ ತಪ್ಪಿ ಇಂಬುದೊರೆತರೆ ಸಾಕು
ಅಧಿಕಾರ ಅಮಲೇರಿ
ಮದ್ಯಕುಡಿದ ಹುಚ್ಚಮಂಗನಂತೆ ಮಾಡುವರಯ್ಯ
ಚಾಡಿಯು ಚೇಳು ಕುಟುಕಿದರಂತೂ ತೀರಿತು
ಏನವರ ಕಿರುಚಾಟ! ಏನವರ ಹಾರಾಟ!!
ಹೇಳತೀರದಯ್ಯ ಹೇಳತೀರದು.
ಕಂಡವರನ್ನು ಕಚ್ಚಿ ಗಾಸಿಗೊಳಿಸುವದಯ್ಯ
ಹುಚ್ಚು ಹಿಡಿಸುವುದಯ್ಯಾ
ಅದರ ಹುಚ್ಚು ಬಿಡಿಸಿ ಮೆಚ್ಚು ಮಾಡಲು
ತಜ್ಞ ಪಶು ವೈದ್ಯ ಬೇಕಯ್ಯಾ
ಸಂಗಮೇಶ ಪ್ರಿಯ ನಿಡು ಮಾವಿಡಿ ಚೆನ್ನಬಸವೇಶ್ವರಾ

# ಬಸವ ಪ್ರತಿಜ್ಞಾ

—ಟಿ. ಎಸ್. ಮಹಾದೇವಯ್ಯ

"ಕಾಯದ ಕಳವಳಕ್ಕಂಜಿ ಕಾಯಯ್ಯ ಎನ್ನೆನು. ಜೀವನೋಪಾಯಕ್ಕಂಜಿ ಈಯಯ್ಯಾ ಎನ್ನೆನು." ಯದ್ಭಾವಂ ತದ್ಭವತಿ, "ಉರಿಬರಲಿ, ಸಿರಿಬರಲಿ, ಬೇಕು ಬೇಡೆನ್ನೆನು. ಆನು ನಿಮ್ಮ ಹಾರೆನು ಮಾನವರ ಬೇಡೆನು. ಆಣೆ ನಿಮ್ಮಾಣೆ ಕೂಡಲ ಸಂಗಮದೇವ."

ಮನುಷ್ಯನು ಹುಟ್ಟಿದ ಮೇಲೆ ಕೆಲಸ ಮಾಡಲೆಬೇಕು. ತಾನು ಮಾಡುವ ಈ 'ಕರ್ಮ'ಕ್ಕೆ ಪ್ರತಿಫಲವನ್ನು ಅಪೇಕ್ಷಿಸುವರು ಕೆಲವರು. ನಿರಪೇಕ್ಷಿಗಳಾಗಿ ಕೆಲಸ ಮಾಡುವವರು ಹಲವರು. ಅದರಲ್ಲಿ ಎರಡನೆಯದಾದ ನಿಷ್ಕಾಮ ಕರ್ಮವೇ ಅತ್ಯಂತ ಶ್ರೇಷ್ಠತರವಾದುದು. ತಾನು ಮಾಡುವ ಕರ್ಮದಲ್ಲಿ ಪ್ರತಿಫಲವನ್ನು ಅಪೇಕ್ಷಿಸುವ ಭಾವನೆಯನ್ನಿಟ್ಟು ಕೊಂಡರೆ, ಸಾಧಾರಣವಾಗಿ ಜೀವನದಲ್ಲಿ ಸಂಭವಿಸಬಹುದಾದ ಆಶೆ ನಿರಾಶೆಗಳ ಫಲವಾಗಿ, ಅವನಿಗೆ ಸುಖ ದುಃಖಗಳು ಉಂಟಾಗುವುವು. ಸುಖ ದುಃಖಗಳಿಂದ ಜೀವನದ ಏರಿಳಿತಗಳೂ ಸಂಭವಿಸಿ, ಅಹಂಕಾರ, ಕುಗ್ಗುವಿಕೆಗಳೂ ಉಂಟಾಗಿ ಮೋಕ್ಷಕ್ಕೆ ಭಯಂಕರವಾದ ಅಡ್ಡಿಗಳಾಗಿ ಬಿಡುವುವು. ಕೆಲಸ ಮಾಡುವುದು ತನ್ನ ಕರ್ತವ್ಯ ಫಲಾಫಲಗಳನ್ನು ನಾನು ವಿಚಾರಿಸಬಾರದು. ಎಂದು ಶ್ರೀ ಕೃಷ್ಣನ ಗೀತಾ ನುಡಿಯಂತೆ ಕರ್ಮ ಮಾಡುವುದು ಜೀವನದ ಹಿರಿಮೆ.

ಹಾಗೆ ಮಾಡುವುದರಿಂದ ತನುವಿನ ಮೇಲಿನ ಅಭಿಲಾಷೆಯುಳಿದು ಹೋಗಿ, ಅಹಂಕಾರವು ನಾಶವಾಗಿ. ಗುರಿಯನ್ನು ಸೇರಲು ಹಾದಿಯು ಪ್ರಶಸ್ತವಾಗುವುದು. ಅದಕ್ಕಾಗಿಯೇ ಸತ್ಪುರುಷರು ಸುಖ ಬಂದರೆ ಹಿಗ್ಗದೆ, ದುಃಖ ಬಂದರೆ ಕುಗ್ಗದೆ ಕಾರ್ಯವನ್ನು ಮಾಡುವರೇ ಹೊರತು ಹಿಡಿದ ಕಾರ್ಯವನ್ನು ಬಿಡುವುದಿಲ್ಲ. ಶ್ರೀ ಕೃಷ್ಣ ಪರಮಾತ್ಮನ ಈ ಗೀತಾ ವಾಕ್ಯವು ಇದನ್ನೇ ಸಮರ್ಥಿಸುತ್ತದೆ.

ಸುಖ ದುಃಖೇ ಸಮೇ ಕೃತ್ವಾ ಲಾಭಾ ಲಾಭೌ ಜಯಾ ಜಯೌ ।
ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪ ಮವಾಪ್ಸ್ಯಸಿ ॥

ಸುಖ ದುಃಖ, ಲಾಭ ಹಾನಿ, ಜಯಾಪಜಯ, ಇವುಗಳನ್ನು ಸಮನಾಗಿ ಭಾವಿಸಿ ಆಮೇಲೆ ಯುದ್ಧಕ್ಕೆ ಪ್ರವೃತ್ತನಾಗು. ಅಂದರೆ ನಿನಗೆ ಪಾಪವು ತಟ್ಟುವುದಿಲ್ಲ. ದೇಹಕ್ಕೆ ತೊಂದರೆ ಬಂದೀತೆಂದು ಹೆದರಿ ದೇವನನ್ನು ಬೇಡುವುದು ತಪ್ಪು. ಸುಖ ಬಂದರೆ ಹಿಗ್ಗುವುದು, ದುಃಖ ಬಂದರೆ ದೇವರೇ! ಕಾಪಾಡು ಎಂದು 'ಸಂಕಟ ಬರಲು



ವೆಂಕಟರಮಣ' ಎಂಬ ನಾಣ್ಣುಡಿಯಂತೆ ಮೊರೆ ಹೊಗುವುದು ಶುದ್ಧ ಹೇಡಿತನವಿರುತ್ತದೆ. ಯೇಸು ಕ್ರಿಸ್ತನು ಹೇಳುವಂತೆ Talk no thoughts for your life. ನಿನ್ನ ಜೀವನದ ಯೋಚನೆ ಮಾಡದೆ ಕೆಲಸ ಮಾಡುವುದೇ ಉತ್ತಮ. ಭಗವಾನ್ ರಾಮಕೃಷ್ಣ ಪರಮಹಂಸರ ನುಡಿಗಳೂ ಇದನ್ನೇ ಸಾರುತ್ತವೆ. ಅನಾಸಕ್ತಿಯಿಂದ ಕೆಲಸ ಮಾಡುವುದು ಬಲು ಬಿಕ್ಕಟ್ಟಿನ ಕಾರ್ಯ. ಆದ್ದರಿಂದ ಕರ್ಮಾಕರ್ಮದ ತೊಡಕಿಗೆ ಸಿಕ್ಕಿ ಬೀಳದಿರು"—ಎಂದಿರುವರು.

ಇದೇ ಶ್ರೇಷ್ಠವಾದ ನಿಸ್ಪೃಹತೆ. ಪರಮಾತ್ಮನಲ್ಲಿ ಭಕ್ತಿ ಹೆಚ್ಚಿದಂತೆಲ್ಲಾ ಈ ರೀತಿಯಾದ ದೇಹದ ಮಮತೆಯುಳಿದ ಕುರುಹುಗಳು ಬಲವಾಗುತ್ತವೆ. ದೇಹಕ್ಕೆ ಬೇಕಾದಷ್ಟು ತೊಂದರೆ ಸಂಭವಿಸಿದರೂ ಭಕ್ತಿಯ ಆವೇಶವು ಅದನ್ನು ತುಳಿದು ಬಿಡುತ್ತದೆ. ಜೀವನದ ವ್ಯವಹಾರವೇ ಕತ್ತರಿಸಿ ಕಳಚಿ ಬೀಳುತ್ತದೆ. ತನಗೆ ಬೇಕಾದುದು ಯಾವುದೂ ಇರುವುದಿಲ್ಲ. ವಸ್ತುವಿನ ಸಂಬಂಧವನ್ನೇ ಇಟ್ಟುಕೊಳ್ಳುವುದಿಲ್ಲ. ಅದರ ಸಂಬಂಧದ ಆವಶ್ಯಕತೆಯೂ ಇರುವುದಿಲ್ಲ. ಈ ಸ್ಥಿತಿಯನ್ನು ಶ್ರೀ ಅರವಿಂದ ಘೋಷರು ಈ ರೀತಿ ವರ್ಣಿಸಿರುವರು—"ಮನಸ್ಸಿನ ಸಮತೆ, ನಿರಾಶೆ, ನಿನ್ನಲ್ಲಿರುವ, ನೀನು ಹೊಂದಿರುವ ನೀನು ಕೂಡಿಟ್ಟ ಎಲ್ಲ ಶಕ್ತಿಯನ್ನು ದೈವ ಶಕ್ತಿಗೆ ಮತ್ತು ಅದರ ಕೆಲಸಕ್ಕೆ ಅರ್ಪಿಸುವುದೇ ಆತ್ಮ ಸ್ವಾತಂತ್ರ್ಯ ಕುರುಹುಗಳು." ಈ ಸ್ಥಿತಿಯನ್ನು ಈ ವಚನದಲ್ಲಿ ಚೆನ್ನಾಗಿ, ತಿಳಿಯಾಗಿ, ಬಸವೇಶ್ವರನು ನುಡಿದಿರುವನು.

"ದೇಹಕ್ಕೆ ಸಂಭವಿಸಬಹುದಾದ ತೊಂದರೆಗಳಿಗೆ ಹೇಡಿಯಂತೆ ನಾನು ಹೆದರಿ, ಅವುಗಳನ್ನು ನಿವಾರಿಸು ಬಾ ಎಂದು ಎಂದೂ ನಿನ್ನನ್ನು ನಾನು ಕರೆಯುವುದಿಲ್ಲ. ಜೀವನ ವ್ಯವಹಾರದಲ್ಲಿ ತಕ್ಕ ಉಪಕರಣಗಳು ಸಿಕ್ಕದೆ ನಾನು ನರಳುತ್ತಿದ್ದರೂ ಯಾರನ್ನೂ ಬೇಡುವುದಿಲ್ಲ. ಭಾವವಿದ್ದಂತೆ ಕಾರ್ಯ ಬೇಕಾದ ಕಷ್ಟನಷ್ಟಗಳು ಸಂಭವಿಸಲಿ. ಬೇಕಾದಷ್ಟು ಧನ ದೌಲತ್ತುಗಳು ಮುಂದೆ ಬಂದು ಬೀಳಲಿ ಅವುಗಳ ಸಂಬಂಧವನ್ನೇ ನಾನು ಕಲ್ಪಿಸಿಕೊಳ್ಳುವುದಿಲ್ಲ. ಯಾವ ಮನುಷ್ಯರನ್ನೂ ಬೇಡುವುದಿಲ್ಲ ಇದಕ್ಕೆ ನಿಮ್ಮಾಣೆಯಿರಲಿ ಪರಮಾತ್ಮನೇ"—ಎಂದು ತನ್ನ ಆತ್ಮ ಬಲವನ್ನು ತೋರಿಸಿರುವನು

---

ಆಸೆ ಆಮಿಷಕ್ಕೆ ಸತ್ತದ್ದು ಕೋಟಿ
ನಿನಗಾಗಿ ಸತ್ತವರನ್ನು ಒಬ್ಬರನ್ನೂ ಕಾಣೆ

—ಅಲ್ಲಮಪ್ರಭು

ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ
ಹಿಡಿದಿರ್ದ ಲಿಂಗ ಘಟಸರ್ಪವಯ್ಯಾ

—ಶ್ರೀ ಬಸವೇಶ್ವರರು

# ಭುವಿಗಿಳಿದ ಶಿವತಾನು... ಇವರಿಗೊಲಿದು...

## 21 ಭಕ್ತ ತಿರುನಾಳ್ಪೊವರ್

—ರುದ್ರ ಪಶುಪತಿ

ಚೋಳ ದೇಶದಲ್ಲಿ ಧನೂರು ಎಂಬ ಚಿಕ್ಕಗ್ರಾಮ. ಅಲ್ಲಿ ತಿರುನಾಳ್ವರ್ ಎಂಬ ಒಬ್ಬ ಭಕ್ತ ಅವನು ಜಾತಿಯಲ್ಲಿ ಕೀಳು ಕುಲದವನು. ಆದರೆ ಪರಮ ಶಿವಭಕ್ತ.

ಯಾವಾಗಲೂ ಶಿವನಾಮ ಜಪಿಸುತ್ತ ತನ್ನ ಕಾಯಕವನ್ನು ಮಾಡುವನು, ತಾನು ತಿರುನಾಳಿಗೆ ಹೋಗಬೇಕು ಅಲ್ಲಿ ಪೊನ್ನಾಂಬಲೇಶ್ವರನ ಉತ್ಸವವನ್ನು ನೋಡಬೇಕು ಎಂಬುದು ಅವನ ಕನಸಾಗಿತ್ತು.

ಆದರೆ ತನ್ನ ಕಾಯಕದಿಂದ ಬಿಡುವೆ ಇಲ್ಲದ ಅವನಾಶೆ ಕನಸಾಗಿಯೆ ಉಳಿದಿತ್ತು ಹನ್ನೆರಡು ಸಂವತ್ಸರಗಳು ಕಳೆದು ಹೋದವು. ಇತ್ತೀಚಿಗೆ ತಿರುನಾಳ್ವರನ ಮನಸ್ಸೆಲ್ಲಾ ಪೊನ್ನಾಂಬಲನ ಉತ್ಸವದ ಕಡೆಗೆ....ರಾತ್ರಿ ಮಲಗಿದರು ಅದೆ ಕನಸು....ಬೆಳಗ್ಗೆ ಎದ್ದರೂ ಅದೆ ನನಸು...

ಉತ್ಸವು ನೋಡುವ ಆಸೆಯುಳಿದು ತಾನು ಹಾಗೆ ಎಲ್ಲಿ ಸಾಯುವೆನೋ... ಎಂದು ಇತ್ತೀಚಿಗೆ ಚಿಂತೆಯಿಂದ ಕಂದಿ ಕಂದಿ ಹೋಗಿರುತ್ತಾನೆ. ಆಗ ಶಿವನ ಕರುಣೆಯಿಂದ ಒಬ್ಬ ಬ್ರಾಹ್ಮಣ ಅವನಲ್ಲಿಗೆ ಬಂದು

“ಲೊ ತಿರುನಾಳ್ವರ ನಾನು ಪೊನ್ನಾಂಬಲನ ಜಾತ್ರೆಗೆ ಹೋಟಿದ್ದೇನೆ. ನೀನು ನನ್ನ ಹಿಂದೆ ನನ್ನ ಸಾಮಾನು ಹೊತ್ತು ತಾರೊ” ಎನ್ನುತ್ತಾನೆ.

ಆನಂದದಿಂದ ಕುಣಿಯುವಂತಾಗುತ್ತದೆ ತಿರುನಾಳ್ವರಿಗೆ ಸಂಭ್ರಮದಿಂದ ಹೊತ್ತು ತರುತ್ತಾನೆ. ಉತ್ಸವ ವೈಭವದಿಂದ ಪ್ರಾರಂಭವಾಗುತ್ತದೆ. ಆದರೆ ಮೇಲು ಜಾತಿಯವರೆಲ್ಲಾ ಮುಂದೆ ಬಂದು ತೇರನ್ನು ನೋಡಲು ಬಿಡುವುದಿಲ್ಲ ಅವನಿಗೆ, ಕಂಡಷ್ಟಕ್ಕೆ ಪುಳಕಿತಗೊಳ್ಳುತ್ತ..... ಕಾಣದ್ದನ್ನು ತಾನೆ ಕಲ್ಪಿಸಿಕೊಳ್ಳುತ್ತಾ ಜಯ ಪೊನ್ನಾಂಬಲ.....ಶಿವಘೊ ಎಂದು ಕೂಗುತ್ತಾ ಕುಣಿಯುತ್ತ ಆನಂದಿಸುತ್ತಿರುತ್ತಾನೆ, ಊರ ಹೊರಗೆ.

ಆಗ ಶಿವನಿಗೆ ಕರುಣೆಯುಂಟಾಗುತ್ತದೆ. ಮುತ್ತಿನ ಮಂಟಪದಲ್ಲಿ ಕುಳಿತು ಹೊನ್ನಿನ ತೇರಲ್ಲಿ ಉತ್ಸವಾ ಹೊರಟಿದ್ದವನು ಪೂಜಾರಿಗೆ ಪ್ರತ್ಯಕ್ಷನಾಗಿ ಇಂಥಾ ಕಡೆ



ನನ್ನ ಭಕ್ತನಿದ್ದಾನೆ ಕರೆತನ್ನಿ ! ಎಂದು ಆಜ್ಞೆ ಮಾಡುತ್ತಾನೆ. ಪೂಜಾರಿ ಬಂದು ನೋಡಿದ, ಊರ ಹೊರಗೆ ಕುಣಿದಾಡುತ್ತಿರುವ ಈ ಕಪ್ಪುಮೈಯವನನ್ನು ನೋಡಿ ಅಸಹ್ಯವಾಯಿತು. “ಛಿ....ಛಿ....... ಇವನು ಶಿವಭಕ್ತನೆ?” ಎನ್ನುತ್ತಾ ಹಿಂತಿರುಗಿ ಬಂದು ಬಿಡುತ್ತಾನೆ ಶಿವಾ ಈ ಭಾರಿ ನಂದೀಶನನ್ನೆ ಕಳುಹಿಸುತ್ತಾನೆ. ನಂದೀಶ ಒಬ್ಬ ವೃದ್ಧನ ವೇಶದಲ್ಲಿ ಬಂದು ತಿರುನಾಳ್ವರನ್ನು ಉತ್ಸವಕ್ಕೆ ಕರೆಯುತ್ತಾನೆ. “ಎಲ್ಲೊ ಉತ್ಸವವಾದರೆ ಎಲ್ಲೊ ಇರುವೆಯಲ್ಲ” “ನಾನು ಹೇಗೆ ಬರಲಿ? ಹಿರಿಯ ಜಾತಿಯವರೆಲ್ಲಾ ಹಳಿಯುವರು” ಎನ್ನುತ್ತಾನೆ ತಿರುನಾಳ್ವರು. “ಕೊಂಡ ಹಾಯಿಸಿ ನಿನ್ನನ್ನು ಹಿರಿಯನನ್ನಾಗಿ ಮಾಡುವೆ” ಎಂದು ನಂದೀಶ ಅವನನ್ನು ಕೊಂಡದೊಳಗೆ ಮುಳುಗಿಸಿ ಬಿಡುತ್ತಾನೆ” ಎದ್ದ ತಿರುನಾಳ್ವರಿಗೆ ಶಿವನ ಸಾರೂಪ್ಯ ಬಂದಿರುತ್ತದೆ ಹೊಸ ಶಿವ ಭಕ್ತ ರೂಪದಲ್ಲಿ ಕಂಗೊಳಿಸುತ್ತಾನೆ.

ಬಂಗಾರ ಬಣ್ಣದ ತನು....... ಪಟ್ಟೆ ಪಟ್ಟೆ( ತೋಳಿಗೆ ಎದೆಗೆ, ಹಣೆಗೆ ) ತೊಡೆದ ವಿಭೂತಿ........ಕೊರಳಲ್ಲಿ ರುದ್ರಾಕ್ಷಿಮಾಲೆ ಕಿವಿಯಲ್ಲಿ ಕುಂಡಲ........ತಲೆಯಲ್ಲಿ ಎತ್ತಿ ಕಟ್ಟಿದ ಜಡೆ........ನಿರ್ಮಲವಾಗಿ ಕಾಂತಿ ಬೀರುವ ತೇಜಸ್ವಿ ರೂಪು........ಎಲ್ಲರ ಬೆರಗಾಗುತ್ತಾರೆ.

ನಂದೀಶಾ ಅವನನ್ನು ಪೊನ್ನಂಬಲನ ಗರ್ಭಗುಡಿ ಒಳಗು ಕರೆದೊಯ್ದು ಮಾಯವಾಗುತ್ತಾನೆ

ತಿರುನಾಳ್ವರನನ್ನು ಗರ್ಭಗುಡಿಯಲ್ಲಿ ಕಾಣದೆ ಜನರು ವಿಸ್ಮಿತರಾಗುತ್ತಾರೆ ಶಿವನೊಡನೆ ಹೊಳೆವ ವಿಮಾನದೊಳಗೆ ಕೂತು ಕೈಲಾಸಕ್ಕೆ ಹಾರಿದ ತಿರನಾಳ್ವರನ ದರ್ಶನ ಹಲವರಿಗಾಗುತ್ತದೆ.

ಶಿವಾ ಅವನಿಗೆ ಗಣ ಪದವಿ ಕೊಟ್ಟು ತನ್ನ ಬಳಿ ಇರಿಸಿ ಕೊಳ್ಳುತ್ತಾನೆ. ●

---

ಮಾನ್ಯ ಅಭಿಮಾನಿಗಳಲ್ಲಿ ವಿನಂತಿ :—

ಸಿದ್ಧಗಂಗಾ ಪತ್ರಿಕೆಗೆ ಚಂದಾದಾರರಾಗಿ ಸಹಕರಿಸುತ್ತಾ ಬಂದಿರುವ ನಮ್ಮ ಎಲ್ಲಾ ಸದಸ್ಯರುಗಳಿಗೆ ಅಭಿನಂದನೆಗಳು. ಸದಸ್ಯರು ತಮ್ಮ ಚಂದಾ ಅವಧಿ ಮುಗಿದಿರುವುದರಿಂದ ಕೂಡಲೇ ಸದಸ್ಯತ್ವವನ್ನು ನವೀಕರಿಸಿಕೊಳ್ಳಲು ವಿನಂತಿಸುತ್ತೇವೆ ವಾರ್ಷಿಕ ಸದಸ್ಯತ್ವ ಚಂದಾ ೨೦ ರೂಪಾಯಿಗಳನ್ನು ಈ ಕೆಳಕಂಡ ವಿಳಾಸಕ್ಕೆ ಅಂಚೆ ಮೂಲಕ ಕಳಿಸಿ ಕೊಡಬೇಕಾಗಿ ಪ್ರಾರ್ಥನೆ.

ಪ್ರಕಾಶಕರು
ಸಿದ್ಧಗಂಗಾ ಮಾಸ ಪತ್ರಿಕೆ
ಸಿದ್ಧಗಂಗಾ ಮಠ

---

# ಪೃಥ್ವಿಯ ವಿಸ್ಮಯಕಾರಿ ಕಟ್ಟಡಗಳು

ಕ್ಯಾಪ್ಟನ್. ಎಂ. ಜಿ. ಕೆ ಮೂರ್ತಿ
172, ಫಸ್ಟ್ ಮೈನ್ ರೋಡ್, ಶೇಷಾದ್ರಿಪುರಂ, ಬೆಂಗಳೂರು. -560020

ಪ್ರಪಂಚದ ನಾನಾ ಕಡೆ ಕೌತುಕಮಯ ಶಿಲ್ಪಗಳು ನಿರ್ಮಾಣವಾಗಿವೆ. ಆಸ್ಟ್ರೇಲಿಯಾದ ರಾಸ್ ಎಂಬ ಊರಿನ ಬಳಿ ಮೋನಾವೇಲ್‌ನಲ್ಲಿ "ಕ್ಯಾಲೆಂಡರ್ ಹೌಸ್" (ದಿನಚರಿ ಮಂದಿರ) ಎಂಬ ಕಟ್ಟಡವಿದೆ, ವರ್ಷದ ಪ್ರತಿ ದಿನವನ್ನು ಸೂಚಿಸುವ ೩೬೫ ಕಿಟಕಿಗಳೂ. ವಾರ ದಿನಗಳನ್ನು ಸಂಕೇತಿಸುವ ಏಳು ಪ್ರವೇಶ ದ್ವಾರಗಳೂ, ತಿಂಗಳಿಗಾಗಿ ಹನ್ನೆರಡು ಹೊಗೆ ಗೂಡುಗಳೂ (ಚಿಮಣಿ), ವರ್ಷದ ಪ್ರತಿ ವಾರದ ಸೂಚನೆಗಾಗಿ ೫೨ ಕೊಠಡಿಗಳೂ ನಿರ್ಮಿತವಾಗಿವೆ

ಸಾಲ್ಟ್‌ಲೇಕ್ ಪಟ್ಟಣದಲ್ಲಿ ೧೮೬೦ ರಲ್ಲಿ ನಿರ್ಮಿಸಿದ ಹಂಗಾಮಿ ಗುಡಾರ ೧೦,೦೦೦ ಜನರಿಗೆ ಸ್ಥಳ ಕೊಡಬಲ್ಲದು. ೨೫೦ ಅಡಿ ಉದ್ದ, ೧೫೦ ಅಡಿ ಅಗಲ, ೧೦ ಅಡಿ ದಪ್ಪವಾಗಿ, ತನಗೆ ತಾನೇ ಆಧಾರವಾಗಿರುವ ಮರದ ಛಾವಣಿ ಮರದ ಗೂಟಗಳಿಂದಲೂ, ಚರ್ಮದ ಬಾರುಗಳಿಂದಲೂ ಭದ್ರವಾಗಿ ಹಿಡಿಯಲ್ಪಟ್ಟಿದೆ. ಇನ್ನೂರು ಕೃತಿಯು ಈ ಕಟ್ಟಡವು ಧ್ವನಿ ಗತಿಶಾಸ್ತ್ರದ ಪ್ರಕಾರ ನಿರ್ಮಿಸಲಾಗಿದೆ. ಇನ್ನೂರು ಅಡಿಗಳ ದೂರದಲ್ಲಿ ಒಂದು ಗುಂಡುಸೂಜಿಯನ್ನು ಉರುಳಿಸಿದರೂ ಅದರ ಶಬ್ಧ ಕೇಳಿ ಬರುತ್ತದೆ.

ಸ್ಪೇನ್ ದೇಶದಲ್ಲಿರುವ "ಎಸ್ ಕೋರಿಯಲ್" ಎಂಬ ಕಟ್ಟಡದಲ್ಲಿ ೩,೦೦೦ ಕೋಣೆಗಳೂ, ೨೬೭೩ ಕಿಟಕಿಗಳೂ, ೧೦೦ ಮೈಲಿ ಒಳಗೆ ಹೋಗುವ ಮಾರ್ಗಗಳೂ ೧೨,೦೦೦ ಬಾಗಿಲುಗಳ ಬೀಗಗಳಿವೆ. ಅದು ಎಷ್ಟು ಅಗಾಧವಾಗಿದೆಯೆಂದರೆ ಅದರ ೧೫,೪೦೦ ಪೌಂಡುಗಳು; (ಸುಮಾರು ಏಳು ಟನ್ನು ತೆರೆಯುವ ಬೀಗದ ಕೈಗಳಭಾರ ಟನ್‌ಗಳು)

ಗ್ರೀಸ್ ದೇಶದ ಪ್ಲೇಟೇನಿಯಂ ನದಿಯ ಮೂಲವು ಒಂದು ಪ್ರಾಚೀನ ಬೃಹದಾಕಾರ ಮರದ ಪೊಟರೆನಿಂದ ಹೊರಗೆ ಹರಿದುಬರುತ್ತದೆ. ಆ ಮರದೊಳಗಿರುವ ಒಂದು ಗುಡಿಯಲ್ಲಿ ೨೦೦೦ ವರ್ಷಗಳಿಂದಲೂ ಸದಾ ಉರಿಯುತ್ತಿರುವ ಒಂದು ದೀಪವಿದೆ.

ಸ್ಯಾನ್ ಫ್ರಾನ್ಸಿಸ್ಕೋನಲ್ಲಿ ಒಂದು ಭವ್ಯ ಕಟ್ಟಡವನ್ನು ಕಟ್ಟುತ್ತಿದ್ದ ಶಿಲ್ಪಿಯ ಮೇಲೆ ಕೊಲೆ ಅಪಾದನೆ ಗೆಂದು, ಅವನಿಗೆ ಮರಣದಂಡನೆ ವಿಧಿಸಲಾಯಿತು. ಆ

ಕಟ್ಟಡದ ಗೋಪುರ ಮುಗಿಯುವವರೆಗೂ ದಂಡನೆ ತಡೆಯಲಾಗಿತ್ತು. ಆ ಘಂಟೆ ಗೋಪುರ ಎಷ್ಟು ಸುಂದರವಾಗಿತ್ತೆಂದರೆ ಶಿಲ್ಪಿಗೆ ವಿಧಿಸಲಾಗಿದ್ದ ಮರಣದಂಡನೆ ಶಿಕ್ಷೆಯನ್ನು ರದ್ದು ಮಾಡಲಾಯಿತು.

ಬವೇರಿಯಾ ದೇಶದ ರಾಜ ಲಡ್ವಿಗ್ ಮತ್ತು ರಾಜಕುಮಾರಿ ಸೋಫಿಯ ಮದುವೆಗಾಗಿ ಐದು ಲಕ್ಷ ಡಾಲರ್ ಖರ್ಚಿನ ಒಂದು ಚಿನ್ನದ ಗಾಡಿ ನಿರ್ಮಾಣವಾಯಿತು ಮದುವೆಯು ನಿಂತು ಹೋಯಿತು; ಆ ಗಾಡಿಯನ್ನು ಎಂದೂ ಉಪಯೋಗಿಸಿಯೇ ಇಲ್ಲ.

ಅಮೇರಿಕದ ಉಪನ್ಯಾಸಕ ರಾಬರ್ಟ್ ಇಂಗರ್‌ಸಾಲ್ ಎಂಬಾತನ ಹೆಸರಿನಲ್ಲಿ ವಾಷ್‌ಬರ್ನ್ ಎಂಬ ಊರಿನಲ್ಲಿ ಪಾಠಶಾಲೆಯೊಂದನ್ನು ಕಟ್ಟಲಾಗಿತ್ತು. ಈ ಕಟ್ಟಡವು ೧೮೯೯ನೇ ಮಾರ್ಚ್ ೨೧ ರಂದು ಉಗ್ರ ಬಿರುಗಾಳಿಗೆ ಸಿಕ್ಕಿ ಕೊಂಡಿತು. ಆಗ ಕಟ್ಟಡವು ತನ್ನ ಅಸ್ತಿಭಾರದ ಮೇಲೆ ತಿರುಗಿ ಬಿಟ್ಟಿತು, ಆದರೆ ಉರುಳಲಿಲ್ಲ. ಅದೇ ದಿನ ಇಂಗರ್‌ಸಾಲ್ ಮೃತನಾಗಿದ್ದ. ಉತ್ತರ ದಿಕ್ಕಿಗೆ ಮುಖಮಾಡಿಕೊಂಡಿದ್ದ ಈ ಕಟ್ಟಡ ಬಿರುಗಾಳಿಯಿಂದ ಪೂರ್ವಕ್ಕೆ ತಿರುಗಿತು. ಇಂಗರ್‌ಸಾಲ್ ಪೂರ್ವ ದಿಕ್ಕಿನಲ್ಲೇ ಮೃತನಾಗಿದ್ದ !

ಸ್ವೀಡನ್ನಿನ ವೈಸ್ಟಾಡ್ ಎಂಬ ಊರಿನಲ್ಲಿ ಎಲ್ಲವೂ ಸುರಕ್ಷಿತವಾಗಿದೆಯೆಂದು ತಿಳಿಸಲು ಸೇಂಟ್ ಮೇರಿ ಚರ್ಚಿನ ಮೇಲಿನಿಂದ ರಾತ್ರಿಯಲ್ಲಿ ಪ್ರತಿ ಹದಿನೈದು ನಿಮಿಷಕ್ಕೊಮ್ಮೆ ತುತೂರಿ ಊದಲಾಗುತ್ತದೆ. ಈ ತಾಮ್ರದ ತುತೂರಿಯನ್ನು ಹೀಗೆ ೨೦೦ ವರ್ಷಗಳಿಂದ ಊದಲಾಗುತ್ತಿದೆ.

## ನಾಯಿಗಳ ಊರು

ಇಂದೂರಿನ ಪೌರಸಭೆಯು ನಾಯಿಗಳಿಗೋಸ್ಕರವೇ ಒಂದು ಸಣ್ಣ ಊರನ್ನು ನಿರ್ಮಿಸಿದೆ. ೫೦೦೦ ನಾಯಿಗಳಿಗೆ ಅಲ್ಲಿ ವಸತಿ ಇದೆ. ಆ ಊರಿಗೆ ಕುತ್ತಾ ಪಿಂಜ್ರಾಪೋಲ್" ಎಂಬ ಹೆಸರು. ನಾಯಿಗಳಿಗೆ ಈ ಊರು ಸುಖಧಾಮ (ಪ್ಯಾರಡೈಜ್) ದಂತಿದೆ. ಎಷ್ಟು ನಾಯಿಗಳಿಗೂ ಉಚಿತ ಊಟ, ಪಾನೀಯಗಳಿಗೆ ವ್ಯವಸ್ಥೆ ಮಾಡಿದೆ, ಗರ್ಭಿಣಿ ನಾಯಿಗಳ ಪ್ರಸವಕ್ಕೆ ವಿಶೇಷ ಹೆರಿಗೆ ಮನೆ ಇದೆ. ಇಂದೂರಿನ ನಿವಾಸಿಗಳು ಮುಖ್ಯವಾಗಿ ಜೈನ ಮತಸ್ಥರಾದ್ದರಿಂದ ನಾಯಿಗಳಿಗೆ ಕೇಡಾಗದಂತೆ ಈ ಸೌಲಭ್ಯಗಳನ್ನು ಕಲ್ಪಿಸಿದ್ದಾರೆ. ಇಲ್ಲಿನ ನಾಯಿಗಳನ್ನು ಊರಿಂದಾಚೆ ೫೦ ಮೈಲಿ ದೂರದಲ್ಲಿ ಬಿಟ್ಟರೂ ಅವು ತಮ್ಮ ಗೆಳೆಯನಾಯಿಗಳನ್ನೂ ಬಾಂಧವರನ್ನೂ ಕರೆದುಕೊಂಡು ತಮ್ಮ ಕುಟೀರಗಳಿಗೇ ಹಿಂತಿರುಗಿ ಬರುತ್ತವೆ.



ಜಗತ್ತಿನ ಕಛೇರಿ ಕಟ್ಟಡಗಳಲ್ಲೆಲ್ಲಾ ಅತ್ಯಂತ ದೊಡ್ಡದಾದ ಪೆಂಟಾಗನ್ ಕಟ್ಟಡ 27 ಎಕರೆ ವಿಸ್ತೀರ್ಣದ ಪ್ರದೇಶವನ್ನು ವ್ಯಾಪಿಸಿ ಕೊಂಡಿದೆ. ದಕ್ಷಿಣ ಆಫ್ರಿಕದ ಸೆಗೈಡಿನಾ ಎಂಬ ಊರಿನಲ್ಲಿ ಎಲ್ಲಾ ಮನೆಗಳನ್ನು ಸಂಪೂರ್ಣವಾಗಿ ಉಪ್ಪಿನ ದೊಡ್ಡ ದಿಮ್ಮಿಗಳಿಂದ ನಿರ್ಮಿಸಲಾಗಿದೆ. ಮಳೆ ಬಂದರೆ ಅವೆಲ್ಲಾ ಕರಗಿ ಹೋಗುತ್ತವೆ. ಆದರೆ ಅಲ್ಲಿ ಮಳೆಯೇ ಇಲ್ಲ. ಚೀನಾದ ಯುಕಾಂಗಿನಲ್ಲಿರುವ ದೇವಾಲಯದ ಬಂಡೆಗಳು ಪ್ರತಿಯೊಂದು ಬಿರುಗಾಳಿಗೆ ಮೊದಲು ಉಬ್ಬಿಕೊಂಡು ಮರದ ಬಾಗಿಲುಗಳು, ಕಿಟಕಿ ಚೌಕಟ್ಟುಗಳೂ ಗುಂಡಿನಂತೆ ಪಟಪಟ ಶಬ್ದ ಮಾಡುತ್ತಾ ಅಲುಗಾಡುವಂತೆ ಮಾಡುತ್ತವೆ; ಈ ಸ್ಥಳವು ಬಿರುಗಾಳಿಯ ಮುನ್ಸೂಚನೆ ಕೊಡುತ್ತದೆ. ದಿನಕ್ಕೊಂದು ಕೋಣೆಯಂತೆ ಅನೇಕ ವರ್ಷಗಳು ವಾಸ ಮಾಡಿದರೂ ಮುಗಿಯದ ಕೋಣೆಗಳು ರೋಮಿನ ವ್ಯಾಟಿಕನ್‌ಭವನದಲ್ಲಿವೆ. ದಕ್ಷಿಣ ಅಮೇರಿಕಾದ ಟಟಕಾ ಸರೋವರದಲ್ಲಿ ಸದಾ ದ್ವೀಪಗಳಂತೆ ತೇಲುತ್ತಿರುವ ಹುಲ್ಲು ರಾಶಿಗಳ ಮೇಲೆ ಅಲ್ಲಿನ ರೆಡ್ ಇಂಡಿಯನ್ ಜನರು ಮನೆಗಳನ್ನು ಕಟ್ಟಿ ಕೊಂಡಿದ್ದಾರೆ. ಚೀನದ "ಗ್ರೇಟ್ ಗೇಟ್" ಎಂಬ ಕಟ್ಟಡವನ್ನು ಒಬ್ಬನೇ ಒಂದೇ ಬಂಡೆಯಲ್ಲಿ 14 ವರ್ಷಗಳ ಕಾಲ ಕೊರೆದು ಮುಗಿಸಿದ.

ಗ್ರೀಸ್‌ನ ಪ್ಲಾಟೀನಿಯಂ ಎಂಬ ನದಿಯ ಮೂಲವು ಪ್ರಚಂಡಾಕೃತಿಯ ಒಂದು ಮರದ ಮಧ್ಯದಲ್ಲಿರುವ ದ್ವಾರದಲ್ಲಿ ಹರಿಯುತ್ತದೆ. ಆ ಮರದೊಳಗೆ ಕಟ್ಟಿರುವ ಗುಡಿಯಲ್ಲಿ 2000 ವರ್ಷಗಳಿಂದಲೂ ದೀಪವು ಸದಾ ಉರಿಯುತ್ತದೆ. ಸ್ಪೇನಿನಲ್ಲಿ 88 ಅಡಿ ಎತ್ತರದಲ್ಲಿ ಕಟ್ಟಿರುವ 712 ಅಡಿ ಉದ್ದದ ಟೆರ್ರಾಗೊನ ಎಂಬ ಪ್ರಣಾಳಿಕೆಯಲ್ಲಿ ಯಾವ ಗಾರೆಯನ್ನೂ ಉಪಯೋಗಿಸಿಲ್ಲ; ಆದರೂ ಅದು 1900 ವರ್ಷಗಳಿಂದಲೂ ಬಲವಾಗಿ ನಿಂತಿದೆ. ಮಲಯದ ಸಕಾಯ್ ಕುಲದವರೂ, ತಿರುವಾಂಕೂರಿನ ಆದಿ ವಾಸಿಗಳೂ ತಮ್ಮ ಮನೆಗಳನ್ನು ದೊಡ್ಡ ಮರಗಳ ಮೇಲೆ ಕಟ್ಟಿಕೊಳ್ಳುತ್ತಾರೆ. ನ್ಯೂಗಿನಿ ಮತ್ತು ಈಸ್ಟ್ ಇಂಡೀಸ್‌ಗಳ ನದೀ ದಡಗಳ ನಿವಾಸಿಗಳು ತಮ್ಮ ವಾಸಸ್ಥಾನಗಳನ್ನು ಪೈನ್‌ಗಳ ಮೇಲೆ ಭೂಮಟ್ಟದಿಂದ 40 ಅಡಿ ಎತ್ತರದಲ್ಲಿ ಕಟ್ಟಿದ್ದಾರೆ. ಟಿಬೆಟ್ಟಿನ ಗುಕಂಗ್ ಗ್ರಾಮದ ನೂರಾರು ಮಂದಿ ಮನೆಗಳು ಮತ್ತು ಸಾಕು ಪ್ರಾಣಿಗಳು ಎಲ್ಲವೂ ಸೇರಿ ಇಡೀ ಗ್ರಾಮವೇ ಒಂದು ಗುಹೆಯೊಳಗಿದೆ.

ಜಗತ್ತಿನಲ್ಲೇ ಅತ್ಯಂತ ದೊಡ್ಡದಾದ ಹೋಟೆಲ್ ಚಿಕಾಗೊದಲ್ಲಿದೆ. 25 ಮಹಡಿಗಳ ಈ ಹಿಲ್ಟನ್ ಹೋಟೆಲ್‌ನಲ್ಲಿ 3,000 ಕೊಠಡಿಗಳಿವೆ. ಒಬ್ಬ ಪ್ರತಿ ದಿನವು ಬೇರೆ ಬೇರೆ ಇರುತ್ತಾ ಹೋದರೆ ಎಲ್ಲಾ ಕೋಣೆಗಳಲ್ಲೂ ಇರಲು ಅವನಿಗೆ ಎಂಟು ವರ್ಷಗಳು ಬೇಕಾಗುತ್ತವೆ.

ಪಿರಮಿಡ್ :—ಈಜಿಪ್ಟಿನಲ್ಲಿರುವ ಅಗಾಧ ಪಿರಮಿಡ್‌ಗಳು "ಜಗತ್ತಿನ ಏಳು ಅದ್ಭುತಗಳಲ್ಲಿ ಒಂದು" ಎಂದು ಗಣಿಸಲ್ಪಟ್ಟಿದೆ. 5000 ವರ್ಷಗಳ ಹಿಂದೆ ಕಟ್ಟಿದ

ಗ್ರೇಟ್ ಪಿರಮಿಡ್‌ಗೆ 25,00,000 ಅತಿ ದೊಡ್ಡ ಪಾದೆಕಲ್ಲುಗಳು ಬೇಕಾದವು. ಪ್ರತಿಯೊಂದು ಚಪ್ಪಡಿಯ ತೂಕ ಸರಾಸರಿ 2½ ಟನ್. ಗಾತ್ರ 40 ಘನ ಅಡಿ ಭಾರಿ ಕಲ್ಲಿನ ತೂಕ 15-20 ಟನ್. ಪ್ರತಿ ಪಕ್ಕವು 7680 ಅಡಿ ಉದ್ದದ ಚಚ್ಚೌಕವಾಗಿದೆ.

13.1 ಎಕರೆ ಸ್ಥಳವನ್ನು ಇದು ಆವರಿಸಿದೆ. ಎತ್ತರ 481 ಅಡಿ ಶಿಖರದಲ್ಲಿ ನಾಲ್ಕು ಪಕ್ಕಗಳ ತುದಿಗಳು ಸಂಗಮವಾಗುತ್ತವೆ. ಒಂದಕ್ಕೊಂದು ಜೋಡಿಸಿ ಸಾಲಾಗಿಟ್ಟರೆ 17 ಸಾವಿರ ಮೈಲಿ ದೂರವಾಗುತ್ತದೆ. ಇದರ ನಿರ್ಮಾಣಕ್ಕೆ ಒಂದು ಲಕ್ಷ ಜನರು 20 ವರ್ಷಗಳ ಕಾಲ ತೆಗೆದುಕೊಂಡರು.

ಇನ್ಕಾ ಜನಾಂಗ:—ಇನ್ಕಾ ಜನರು ವಾಸ್ತುವಿದ್ಯೆ, ಕೈಗಾರಿಕೆ, ಶಿಲ್ಪ ವಿದ್ಯೆ ಬೃಹದಾಕಾರದ ಕಟ್ಟಡ ರಚನೆಗಳಲ್ಲಿ ಪ್ರವೀಣರಾಗಿದ್ದರು. ಭಾರೀ ಪಟ್ಟಣಗಳು ಅರಮನೆಗಳು, ಕೆತ್ತಿದ ಕಲ್ಲಿನ ದೇವಾಲಯಗಳು ಪುರದುರ್ಗಗಳು ನಿರ್ಮಿಸಲ್ಪಟ್ಟವು. "ಸಜಾಸುಹಮಾನ್" ಕೋಟೆಯು ಪೃಥ್ವಿಯ ಅತ್ಯಂತ ಮಹತ್ತರ ಕೋಟೆಗಳ ಲ್ಲೊಂದು ಅದರ ಪ್ರತಿಯೊಂದು ಕಲ್ಲು 30 ಅಡಿ ಎತ್ತರ. ಕೆಲವು ಕಲ್ಲುಗಳು 100 ಟನ್‌ಗಳಿಗಿಂತಲೂ ಹೆಚ್ಚು ಭಾರ. ಅವುಗಳಿಗೆ ಗಾರೆಯನ್ನೇ ಉಪಯೋಗಿಸಿಲ್ಲ; ಆದರೂ ಅನೇಕ ಶತಮಾನಗಳನಂತರವೂ ಅವುಗಳು ಎಷ್ಟು ಹೊಂದಿಕೆಯಿಂದ ಸರಿಗೂಡಿವೆ ಎಂದರೆ ಅವುಗಳ ಮಧ್ಯೆ ಚಾಕುವಿನ ಅಲಗನ್ನು ಕೂಡ ತೂರಿಸಲಸಾಧ್ಯ. 12-16 ನೇ ಶತಮಾನಗಳ ಯಾವ ಆಯುಧಗಳೂ ಆ ಕೋಟೆಯನ್ನು ಜಗ್ಗಿಸಲಾಗುತ್ತಿರಲಿಲ್ಲ. ರಾಜಧಾನಿಯಾಗಿದ್ದ ಕುಸ್ಕೋ ಪಟ್ಟಣದಲ್ಲಿ ಕಟ್ಟಿದ್ದ ಪ್ರಚಂಡಾಕೃತಿಯ ದೇವಾಲಯವು ಶಿಲಾಕೌಶಲ್ಯದಲ್ಲಿ ಜಗತ್ತಿನ ಅತ್ಯಂತ ವಿಸ್ಮಯಕಾರಿ ಕಟ್ಟಡಗಳಲ್ಲೊಂದಾಗಿತ್ತು.

12 ಕೋಣಗಳುಳ್ಳ ಕಲ್ಲುಗಳು ಜಿಗ್‌ಸಾ ಒಗಟಿನಂತೆ (Jigsaw Puzzle) ಸಮಂಜಸವಾಗಿ ಸೇರಿಸಲ್ಪಟ್ಟಿವೆ. ಕಾಮಾಟಿಗರು ಅವ್ಯವಸ್ಥಿತ ಕಲ್ಲು ದಿಮ್ಮಿಗಳನ್ನು ನಯವಾಗಿ ತೇದು ಸಮ ಚತುಷ್ಕೋಣ ಆಕೃತಿ ಕೊಟ್ಟು, ಕಚ್ಚು ನರಕಗಳನ್ನು ಕೊರೆದು ಗಾರೆಯಿಲ್ಲದೆ ಒಂದಕ್ಕೊಂದು ಅಚ್ಚುಕಟ್ಟಾಗಿ ಹೊಂದಿಕೆಯಾಗುವಂತೆ ಜೋಡಿಸಿ, ಭೂಕಂಪಗಳು ಕೂಡ ಅಲುಗಾಡಿಸದಂತೆ ಕೀಲುಗಳನ್ನು ಮಾಡಿ, ರೇಜರ್ ಬ್ಲೇಡ್ ಕೂಡ ತೂರಲಾರದಷ್ಟು ನಾಜೂಕಾಗಿ ಹೊಂದಿಸಿ ಕೂಡಿಸಿರುವುದು ಎಂಥ ವಿಸ್ಮಯ! ಗಾತ್ರ, ಆಕಾರಗಳಲ್ಲಿ ಯಾವ ಎರಡು ಕಲ್ಲುಗಳೂ ಒಂದೇ ಸಮನಾಗಿಲ್ಲದಿದ್ದರೂ ಭಾರಿ ಕಲ್ಲು ದಿಮ್ಮಿಗಳು ಗಣಿತ ಶಾಸ್ತ್ರ ನಿಯಮಗಳನ್ನನುಸರಿಸಿ ಕೆತ್ತಲ್ಪಟ್ಟಂತೆ ವರ್ತಲಾಕಾರದಲ್ಲಿ ಸುಂದರವಾಗಿ ಹೊಂದಿಕೆಯಿಂದ ಕೂಡಿಸಲ್ಪಟ್ಟಿವೆ. ಗಟ್ಟಿ ಬಂಡೆ ಮಧ್ಯದಲ್ಲಿ ಬಿರುಕು ಬಿಟ್ಟಿದ್ದರೂ ಆ ಸೀಳಿನಿಂದ ಒಂದಂಗುಲ ದೂರದಲ್ಲಿರುವ ಕೀಲು ಅಲುಗಾಡಿಲ್ಲ.



ಚಿಕಾಗೋ ಪಟ್ಟಣದ ಲೇಕ್ ಸ್ಟ್ರೀಟ್‌ನಲ್ಲಿರುವ ಕಟ್ಟಡಗಳ ಇಡೀ ಸಾಲನ್ನು
1857 ನೇ ಇಸವಿಯಲ್ಲಿ ಬಹು ದೊಡ್ಡ 6000 ಜಾಕ್ (Jack) ಗಳಿಂದ ನಾಲ್ಕು
ಅಡಿಗಳಷ್ಟು ಮೇಲಕ್ಕೆ ಎತ್ತಲಾಯಿತು. ಅವುಗಳಲ್ಲಿ ಬಹುವಾಗಿ ಐದು ಅಂತಸ್ತುಗಳ
ಕಟ್ಟಡಗಳಿದ್ದವು. ಇದೊಂದು ಅಪೂರ್ವ ಎಂಜಿನಿಯರಿಂಗ್ ಸಾಹಸ.

ಅಸ್ಸಿರ್ನಿ ಎಂಬ ರಾಜಕುಮಾರನು ಬಾಯಿ ತೆರೆದುಕೊಂಡ ವಿಕಟಾಕಾರದ
ರಾಕ್ಷಸ ಮೃಗವನ್ನು ಕನಸಿನಲ್ಲಿ ಕಂಡು ಅದೇ ಆಕಾರದ ಒಂದು ಭಾರೀ ಕಟ್ಟಡವನ್ನು
೧೫೬೦ ರಲ್ಲಿ ನಿರ್ಮಿಸಿದ.

ಚೀನಾದ ಒಂದು ಬೃಹದಾಕಾರದ ಬುದ್ಧನ ಪ್ರತಿಮೆಯಲ್ಲಿ ನೂರಾರು ಗ್ರಂಥ
ಗಳಿರುವ ಒಂದು ಗ್ರಂಥಾಲಯವಿದೆ.

ಯೂಸಫ್ ಬ್ಯೂಲಿನ್ ಎಂಬ ಶಿಲ್ಪಿ ಈಜಿಪ್ಟಿನ ಕೈರೋ ಪಟ್ಟಣದಲ್ಲಿ ಬಹು
ರಮ್ಯವಾದ ಕಟ್ಟಡವೊಂದನ್ನು 24 ವರ್ಷಗಳ ಕಾಲ ಪರಿಶ್ರಮಿಸಿ ಮುಗಿಸಿದ.
ಈಜಿಪ್ಟಿನ ಪಾಷಾಗೆ ಅದರಿಂದ ಎಷ್ಟು ಹರ್ಷವಾಯಿತೆಂದರೆ ಅವನು ಶಿಲ್ಪಿಗೆ ಉದಾರ
ವರ್ಷಾಶನವನ್ನು ಮುಂಜೂರು ಮಾಡಿ ಅವನು ಅಂಥಾ ಸುಂದರ ಕಟ್ಟಡವನ್ನು
ಮತ್ತೆಲ್ಲೂ ಕಟ್ಟದಂತೆ ಅವನ ಕಣ್ಣುಗಳನ್ನು ಕೀಳಿಸಿದ.

---

# ಭೂ ಸುಧಾರಣೆಗಳು ಮತ್ತು ಸಹಕಾರಿ ಬೇಸಾಯ


—ಡಿ. ವೆಂಕಟರಾವ್, ಎಂ.ಎ.

"ಚಂದನ" ವಿದ್ಯಾನಗರ, ಹಾಸನ.


ಕೃಷಿ ಭಾರತೀಯರ ಜೀವನದ ಜೀವನಾಡಿ. ಕಾಲಕಾಲಾಂತರಗಳಿಂದಲೂ ಅವರ ಬದುಕಿನಲ್ಲಿ ಕೃಷಿ ಮಂತ್ರವು ತರಂಗ ತರಂಗವಾಗಿ ಮಿಡಿಯುತ್ತ ಬಂದಿದ್ದು, ಇಂದು ಕೃಷಿ ಭಾರತದ ಬಹು ಸಂಖ್ಯಾತರ ಜೀವನಾಧಾರ ಮುಖ್ಯ ವೃತ್ತಿಯಾಗಿದ್ದು, ಮೊದಲಿಗಿಂತಲೂ ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿದೆ. ಸಹಸ್ರ ಸಹಸ್ರ ವರ್ಷಗಳಿಂದಲೂ ಒಂದು ಪವಿತ್ರವಾದ ಕಸುಬಾಗಿ ಬೆಳೆದುಕೊಂಡು ಬಂದಿರುವ ಕೃಷಿಯು ಇಂದು ಎಂದಿಗಿಂತಲೂ ಹೆಚ್ಚಿನ ಹೊಣೆಗಾರಿಕೆಯುಳ್ಳ ಹಾಗೂ ಗೌರವಯುತವಾದ ವೃತ್ತಿಯಾಗಿ ಪರಿಣಮಿಸಿದೆ. ರಾಷ್ಟ್ರದ ಅರ್ಥ ವ್ಯವಸ್ಥೆಯ ರಂಗ ಮಂಟಪದಲ್ಲಿ ಕೃಷಿ ನಿರ್ವಹಿಸುವ ಪಾತ್ರ ಅತಿ ಉನ್ನತ ಮಟ್ಟದ್ದು. ಕೃಷಿ ಪ್ರಧಾನವಾಗಿರುವ ಭಾರತದಲ್ಲಿ ಕೃಷಿಯೇ ಜನಜೀವನದ ಜೀವಾಳವಾಗಿದ್ದು, ಅದರಿಂದ ದೊರೆಯುವ ಪ್ರಯೋಜನಗಳು ಅಳತೆಗೆ ನಿಲುಕದ್ದು. ಜನತೆಗೆ ಆಹಾರ, ಜಾನುವಾರುಗಳಿಗೆ ಮೇವು, ಕೈಗಾರಿಕೆಗೆ, ವ್ಯಾಪಾರ ಮತ್ತು ಸಾರಿಗೆ ರಂಗ ಇವೆಲ್ಲಕ್ಕೂ ಕೃಷಿಯೇ ಮೂಲಾಧಾರ. ಉಳಿದೆಲ್ಲ ಉದ್ಯಮಗಳ ಪೂರಕ ಬೇಡಿಕೆಗಳನ್ನು ಒದಗಿಸುವ ಕಲ್ಪತರು ಕೃಷಿ. ವಿದೇಶ ವಿನಿಮಯ ಗಳಿಕೆಯಲ್ಲಿ ರಾಷ್ಟ್ರೀಯ ಆದಾಯದ ಪೂರೈಕೆಯಲ್ಲಂತೂ ಅದರ ಪ್ರಾಮುಖ್ಯತೆ ಅತಿ ಮಹತ್ವದ್ದು. ಈ ಕಾರಣಗಳಿಂದ ಭಾರತದ ಅರ್ಥ ವ್ಯವಸ್ಥೆಯಲ್ಲಿ ಕೃಷಿಗೆ ಅತ್ಯಂತ ಮಹತ್ತರ ಸ್ಥಾನವನ್ನು ನೀಡಲಾಗಿದೆ. ಆದಾಗ್ಯೂ ದುರ್ದೈವದ ಸಂಗತಿ ಎಂದರೆ ಇದುವರೆಗೂ ಕೃಷಿ ಕ್ಷೇತ್ರದಲ್ಲಿ ಸಾಕಷ್ಟು ತೃಪ್ತಿಕರವಾದ ಬೆಳವಣಿಗೆ ಆಗಿಲ್ಲದಿರುವುದು. ಇದಕ್ಕೆ ಕಾರಣಗಳು ಹಲವಾರು. ರೈತರ ಬಡತನ ಹಾಗೂ ಅಜ್ಞಾನ, ನೀರಾವರಿಯ ಸೌಲಭ್ಯಗಳ ಕೊರತೆ, ಹಳೆಯ ರೀತಿಯ ಉಪಕರಣಗಳು, ಸಾರವಿಲ್ಲದ ಗೊಬ್ಬರ ಹಾಗೂ ಬೀಜಗಳ ಬಳಕೆ, ಜಮೀನು ಹಂಚಿಕೆ ವಿಧಾನ ಇತ್ಯಾದಿಗಳು. ಈ ಅನೇಕ ಕಾರಣಗಳಲ್ಲಿ ಭೂ ಹಿಡುವಳಿ ಪದ್ಧತಿಯು ಕೃಷಿ ಅಭಿವೃದ್ಧಿಯ ಹಾದಿಯಲ್ಲಿ ಬಹು ದೊಡ್ಡ ತೊಡಕಿನ ಮುಳ್ಳಾಗಿದೆ ಎಂದು ಹೇಳಬಹುದು. ಇಂದು ನಮ್ಮ ದೇಶದಲ್ಲಿ ಸಂಪತ್ತಿನ ಉತ್ಪಾದನೆ ಅಧಿಕಗೊಂಡಿದೆ. ಆದರೂ ಜನ ಜೀವನ ಮಾತ್ರ ಸೌಲಭ್ಯಗಳ ಕೊರತೆಯ ಹಿಡಿತದಲ್ಲಿ ಸಿಲುಕಿ ನರಳುತ್ತಿದೆ. ಇದಕ್ಕೆ ಮುಖ್ಯ ಕಾರಣ ಸಂಪತ್ತಿನ ಉತ್ಪಾದನೆಗಿಂತಲೂ ಸಂತಾನದ ಉತ್ಪಾದನೆ ಹೆಚ್ಚಿರುವುದು. ಇದೇಕೆಂದರೆ ಸಂಪತ್ತಿನ ಉತ್ಪಾದನೆಗಿಂತಲೂ ... ರಾಷ್ಟ್ರವನ್ನೇ ಕಲ್ಲಣಗೊಳಿಸುತ್ತಿರುವ ನಮ್ಮ ಭೀಕರ ಶತ್ರುವಾದ ಜನಸಂಖ್ಯೆಯು ಮಿತಿ

ಹೀರಿ ಬೆಳೆದಂತೆಲ್ಲಾ ಭೂ ಹಿಡುವಳಿಗಳು ಛಿದ್ರ ಛಿದ್ರವಾಗುತ್ತಿವೆ. ಇದರಿಂದಾಗಿ ಕೃಷಿ ಉತ್ಪಾದನೆ ಕುಗ್ಗುವುದು. ತತ್ಪರಿಣಾಮವಾಗಿ ಆಹಾರ ಧಾನ್ಯಗಳನ್ನು ವಿದೇಶಗಳಿಂದ ಆಮದು ಮಾಡಿಕೊಳ್ಳುವುದು ಹೆಚ್ಚಾಗುತ್ತಿದೆ. ರಾಷ್ಟ್ರದ ಭವಿಷ್ಯದ ದೃಷ್ಟಿಯಿಂದ ಇದು ತುಂಬಾ ಆತಂಕಕಾರಿ ಎನ್ನುವುದರಲ್ಲಿ ಸಂಶಯವಿಲ್ಲ. ಇದೇ ಪರಿಸ್ಥಿತಿಯನ್ನು ಬೆಳೆಯಗೊಟ್ಟರೆ ಅನಾಹುತಕ್ಕೆ ಆಹ್ವಾನವಿತ್ತಂತೆ. ಆದ್ದರಿಂದ ಈ ಸಮಸ್ಯೆಯಿಂದ ವಿಮುಕ್ತಿ ಹೊಂದಿ, ಕೃಷಿ ಉತ್ಪಾದನೆಯನ್ನು ಹೆಚ್ಚಿಸುವ ಹಾಗೂ ಶೀಘ್ರಗತಿಯಲ್ಲಿ ಕೈಗಾರಿಕಾ ಪ್ರಗತಿಯನ್ನು ಹೊಂದುವ ಉದ್ದೇಶದಿಂದ ನಮ್ಮ ದೇಶದಲ್ಲಿ ಭೂ ಸುಧಾರಣೆಗಳ ಶಾಸನವನ್ನು ಜಾರಿಗೆ ತರಲಾಗಿದೆ.

ಭೂ ಸುಧಾರಣೆಗಳೆಂದರೆ ಭೂ ಅಭಿವೃದ್ಧಿಯ ಬಗ್ಗೆ ಸರ್ಕಾರ ಕೈಗೊಳ್ಳುವ ಕಾರ್ಯಕ್ರಮಗಳು. ಕೃಷಿ ಉತ್ಪನ್ನವನ್ನು ಹೆಚ್ಚಿಸಲು ಆಚರಣೆಗೆ ತರುವ ಪ್ರಗತಿದಾಯಕ ಸುಧಾರಣೆಗಳು. ಕೃಷಿ ಅಭಿವೃದ್ಧಿಯ ಹಾದಿಯಲ್ಲಿ ಇದೊಂದು ಕ್ರಾಂತಿಕಾರಿ ಹೆಜ್ಜೆಯಾಗಿದೆ. ಭೂ ಸುಧಾರಣಾ ಶಾಸನದಿಂದಾಗಿ ಲಕ್ಷಾಂತರ ಮಂದಿ ಭೂರಹಿತ ನಿರ್ಗತಿಕರ ದೀರ್ಘಕಾಲದ ಕನಸು ನನಸಾಗಿದೆ. ಈ ಶಾಸನದನ್ವಯ ಇವರು ಇನ್ನು ಮುಂದೆ ಜಮೀನುದಾರರ ಅಡಿಯಾಳುಗಳಲ್ಲ. ಭೂ ಸುಧಾರಣೆಯ ಮೂಲ ಉದ್ದೇಶವೆಂದರೆ ನಮ್ಮ ಕೃಷಿ ಪದ್ಧತಿಯಲ್ಲಿ ನಡೆಯುತ್ತಿರುವ ಅನ್ಯಾಯಗಳನ್ನು ತಡೆಗಟ್ಟುವುದು, ರೈತರ ಶೋಷಣೆಯನ್ನು ತಪ್ಪಿಸುವುದು, ಗೇಣಿದಾರರ ಶ್ರಮದ ಫಲವನ್ನು ನಿರಾಯಾಸವಾಗಿ ಪಡೆದು ಹಾಯಾಗಿರುವ ಜಮೀನ್ದಾರಿ ಪದ್ಧತಿಯನ್ನು ತೊಡೆದುಹಾಕಿ ಜಮೀನುದಾರರು, ಗೇಣಿದಾರರು ಎಂಬ ಭೇದವನ್ನು ಇಲ್ಲವಾಗಿಸುವುದು. ಗ್ರಾಮಾಂತರ ಸಾಹುಕಾರರ ಹಾಗು ಬಡವರ ಮಧ್ಯೆ ಏರ್ಪಟ್ಟಿರುವ ಅಂತರವನ್ನು ನಿವಾರಿಸಿ ಆರ್ಥಿಕ ಸಮಾನತೆಯನ್ನು ತರುವುದು ರೈತರಿಗೂ–ಸರಕಾರಕ್ಕೂ ನಡುವೆ ಇರುವ ಮಧ್ಯಸ್ಥಗಾರರನ್ನು ನಿರ್ಮೂಲಮಾಡುವುದು. ಉಳುವವನೇ ಭೂ ಒಡೆಯನಾಗಬೇಕೆಂಬ ಮಸೂದೆಯನ್ನು ಜಾರಿಗೆ ತರುವುದು. ಸ್ವತಃ ಕೃಷಿಯನ್ನು ಕೈಗೊಳ್ಳುವವರಿಗೆ ಮಾತ್ರವೇ ಒಡೆತನದ ಹಕ್ಕನ್ನೂ ಕಲ್ಪಿಸಿಕೊಡುವುದೇ ಭೂ ಸುಧಾರಣೆಯ ಮುಖ್ಯ ಗುರಿ. ಯೋಧರು ಮತ್ತು ನಾವಿಕರು ಮಾತ್ರ ಈ ನಿಯಮಕ್ಕೆ ಹೊರತಾಗಿದ್ದಾರೆ.

ನಮ್ಮ ದೇಶದಲ್ಲಿ ಐದು ಬಗೆಯ ಭೂ ಸುಧಾರಣೆಯ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರಲಾಗಿದ್ದು ಅವು ಈ ರೀತಿ ಇವೆ.

1. ಜಮೀನ್ದಾರಿ ಪದ್ಧತಿಯನ್ನು ನಿರ್ಮೂಲಗೊಳಿಸುವುದು.
2. ಟೆನೆನ್ಸಿ ಪದ್ಧತಿಯ ಸುಧಾರಣೆಗಳು.
3. ತುಂಡು ಹೊಲಗಳ ಜೋಡಣೆ.



4. ಭೂಮಿಯ ಹಿಡುವಳಿಗಳ ಮೇಲೆ ಗರಿಷ್ಠ ಮಿತಿ.
5. ಸಹಕಾರಿ ಬೇಸಾಯ ಪದ್ಧತಿ.

ಭೂ ಸುಧಾರಣೆಯ ಕಾರ್ಯಕ್ರಮಗಳಲ್ಲಿ ಜಮೀನ್ದಾರಿ ಪದ್ಧತಿಯ ನಿರ್ಮೂಲನವು ಮೊದಲ ಹೆಜ್ಜೆಯಾಗಿದೆ. ಜಮೀನ್ದಾರಿ ಪದ್ಧತಿ ಎಂದರೆ ಒಂದು ಇಡೀ ಹಳ್ಳಿಗೆ ಅಥವಾ ಅನೇಕ ಹಳ್ಳಿಗಳಿಗೆ ಒಬ್ಬನೇ ಮಾಲೀಕನಾಗಿರುವುದು. ಅವನು ಭೂಮಾಲೀಕ ಎಂದು ಕರೆಸಿಕೊಳ್ಳುತ್ತಾನೆ. ರೈತನಿಗೆ ಜಮೀನಿನ ಮೇಲೆ ಯಾವ ಹಕ್ಕೂ ಇರುವುದಿಲ್ಲ. ಇವರೆಲ್ಲರೂ ಜಮೀನನ್ನು ಜಮೀನ್ದಾರನಿಂದ ಗೇಣಿ ಪಡೆದು ಸಾಗುವಳಿ ಮಾಡುತ್ತಾರೆ. ಇವರು ಬೆವರು ಹರಿಸಿ ಕಷ್ಟಪಟ್ಟು ದುಡಿದ ಪ್ರತಿಫಲವೆಲ್ಲಾ ಸೋಮಾರಿಯಾದ ಜಮೀನುದಾರನು ಕಬಳಿಸಿ ರೈತರ ರಕ್ತವನ್ನು ತಿಗಣೆಗಳಂತೆ ಹೀರುತ್ತಾನೆ. ಈ ಪದ್ಧತಿಯಲ್ಲಿ ಗೇಣಿದಾರರಿಗೆ ಆರ್ಥಿಕ ಭದ್ರತೆ ಇರುವುದಿಲ್ಲವಾದ್ದರಿಂದ ಜಮೀನ್ದಾರನು ತಮ್ಮನ್ನು ಯಾವಾಗ ಓಡಿಸಿಬಿಡುವನೋ ಎಂಬ ಹೆದರಿಕೆಯಿಂದ ಅವನು ಕೊಡುವ ಕಿರುಕುಳವನ್ನೆಲ್ಲಾ ಗೇಣಿದಾರರು ಬಲವಂತವಾಗಿ ಸಹಿಸಿಕೊಳ್ಳಬೇಕಾಗುತ್ತದೆ. ಜಮೀನುದಾರನಿಗೆ ಬೇಕಾಗಿರುವುದು ಗುತ್ತಿಗೆಯೇ ಹೊರತು ಜಮೀನಿನ ಅಭಿವೃದ್ಧಿಯಲ್ಲ. ಆದ್ದರಿಂದ ಅವನು ಪ್ರತಿವರ್ಷವೂ ಗುತ್ತಿಗೆಯನ್ನು ಹೆಚ್ಚಿಸಿ ಸರಕಾರಕ್ಕೆ ಮಾತ್ರ ಯಾವಾಗಿನಷ್ಟೇ ಕಂದಾಯವನ್ನು ಕೊಡುವನು. ಇದರಿಂದ ಸರ್ಕಾರಕ್ಕಾಗಲೀ, ಬಡ ರೈತರಿಗಾಗಲೀ ಯಾವ ಬಗೆಯ ಪ್ರಯೋಜನವೂ ಆಗದೆ ಇವರಿಬ್ಬರ ಮಧ್ಯೆ ರಕ್ತ ಹೀರಿ ಜೀವಿಸುವ ಜಮೀನ್ದಾರರು ಮಾತ್ರ ದಿನೇ ದಿನೇ ಶ್ರೀಮಂತರಾಗುತ್ತಾರೆ. ಕೃಷಿ ಉತ್ಪನ್ನ ಕುಂಠಿತಗೊಳ್ಳುತ್ತದೆ. ಇದೆಲ್ಲವನ್ನೂ ಮನಗಂಡು 1948 ರಲ್ಲಿ ನಮ್ಮ ದೇಶದ ರಾಷ್ಟ್ರೀಯ ಕಾಂಗ್ರೆಸ್ ಸರಕಾರಕ್ಕೂ ರೈತರಿಗೂ ನಡುವೆ ಇರುವ ಮಧ್ಯವರ್ತಿಗಳಾದ ಪರಾವಲಂಬಿ ಸಮಾಜ ಕಂಟಕರಾದ ಜಮೀನುದಾರರನ್ನು ನಿರ್ಮೂಲಗೊಳಿಸಲು ಘೋಷಿಸಿದ್ದು, ಅಲ್ಲಿಂದೀಚೆಗೆ ನಮ್ಮ ರಾಷ್ಟ್ರೀಯ ಸರ್ಕಾರವು ಜಮೀನ್ದಾರಿ ಪದ್ಧತಿಯನ್ನು ರದ್ದುಪಡಿಸುವ ಕೆಲಸವನ್ನು ಮನಃಪೂರ್ವಕವಾಗಿ ಕೈಗೊಂಡಿದೆ. ಪ್ರತಿಯೊಂದು ರಾಜ್ಯವೂ ಜಮೀನ್ದಾರಿ ಪದ್ಧತಿಯ ರದ್ದಿನ ಮಸೂದೆಯನ್ನು ಜಾರಿಗೆ ತಂದಿವೆ. ಜಮೀನನ್ನು ರೈತರಿಗೆ ಕೊಟ್ಟರೆ ಹುಟ್ಟುವ ತೊಂದರೆಗಳನ್ನು ನಿವಾರಣೆಮಾಡಲು ಭೂಮಿಯ ವಿಸ್ತಾರಕ್ಕೆ ಒಂದು ಕನಿಷ್ಠ ಮಿತಿಯನ್ನು ಗೊತ್ತುಪಡಿಸಿ ಅದಕ್ಕಿಂತ ಕಡಿಮೆ ವಿಸ್ತಾರದ ಜಮೀನನ್ನು ಮಾರಲು ಯಾವ ರೈತನಿಗೂ ಹಕ್ಕಿಲ್ಲ ಎಂಬ ನಿಯಮವನ್ನೂ ಇಂದು ಜಾರಿಗೆ ತರಲಾಗಿದೆ. ಈ ಪದ್ಧತಿಯ ನಿರ್ಮೂಲನದಿಂದಾಗಿ ಸುಮಾರು 3 ಕೋಟಿ ಜನರಿಗೆ ಭೂಮಿಯು ದೊರೆತು ಅವರ ಬದುಕಿನಲ್ಲಿ ನೆಮ್ಮದಿಯು ನೆಲೆಗೊಳ್ಳಲು ಕಾರಣವಾಗಿದೆ. ಜಮೀನ್ದಾರರಿಂದ ರೈತರ ಶೋಷಣೆಯು ನಿಂತಿರುವುದರೊಂದಿಗೆ, ಭೂಮಿಯ ಹಂಚಿಕೆಯಲ್ಲಿ ನ್ಯಾಯ ದೊರಕಿದಂತಾಗಿದೆ. ಭೂಮಿಯು ರೈತರ ಸ್ವಂತ ಆಸ್ತಿಯಾಗಿರುವುದರಿಂದ ಅವರು

ಹೆಚ್ಚು ಶ್ರದ್ಧೆಯಿಂದ ದುಡಿದು ಕೃಷಿ ಉತ್ಪನ್ನವನ್ನು ಹೆಚ್ಚಿಸುವುದರಲ್ಲಿ ಕಾರ್ಯ ತತ್ಪರರಾಗಿದ್ದಾರೆ. ಇವರು ಸರಕಾರಕ್ಕೆ ಕಂದಾಯದ ರೂಪದಲ್ಲಿ ಕೊಡುವ ಹಣವು ಪುನಃ ಸಾರ್ವಜನಿಕರ ಸೇವೆ, ಕಲ್ಯಾಣಗಳಿಗಾಗಿ ವಿನಿಯೋಗವಾಗುತ್ತಿದೆ. ಹೀಗೆ ಜಮೀನ್ದಾರಿ ಪದ್ಧತಿಯ ರದ್ಧತಿಯು ನಮ್ಮ ಸರ್ಕಾರ ಸ್ವಾತಂತ್ರ್ಯಾನಂತರ ಸಾಧಿಸಿದ ಒಂದು ಮಹತ್ವದ, ದಿಟ್ಟ ಹಾಗೂ ಪರಿಣಾಮಕಾರಿಯಾದ ಸಾಧನೆಯಾಗಿದೆ. ಆದಾಗ್ಯೂ ಈ ದಿಸೆಯಲ್ಲಿ ಸರ್ಕಾರ ಸಂಪೂರ್ಣ ಯಶಸ್ಸನ್ನು ಸಾಧಿಸಿಲ್ಲ ಎಂದೇ ಹೇಳಬೇಕು. ಈ ಪದ್ಧತಿಯನ್ನು ನಿರ್ಮೂಲಗೊಳಿಸುವುದು ಅಷ್ಟೇನು ಸುಲಭದ ಕೆಲಸವಲ್ಲ. ಏಕೆಂದರೆ ಭಾರತದ ಸಂವಿಧಾನದ ಪ್ರಕಾರ ಸರಕಾರವು ಪರಿಹಾರ ನೀಡದೆ ಭೂಮಿಯನ್ನು ವಶಪಡಿಸಿಕೊಳ್ಳುವಂತಿಲ್ಲ. ಈ ರೀತಿ ಜಮೀನ್ದಾರರಿಂದ ಭೂಮಿಯನ್ನು ಕೊಂಡುಕೊಳ್ಳಲು ಸರಕಾರ ನೂರಾರು ಕೋಟಿ (ಸುಮಾರು 600 ಕೋಟಿ) ರೂ. ವೆಚ್ಚಮಾಡಬೇಕಾಗುವುದು. ಆದಾಗ್ಯೂ ಈ ದಿಸೆಯಲ್ಲಿ ಸರಕಾರ ಶ್ರಮವಹಿಸಿ ಸಾಧಿಸುತ್ತಿರುವ ಸಾಧನೆ ಸ್ತುತ್ಯಾರ್ಹವಾಗಿದೆ.

(ಮುಂದುವರಿಯುತ್ತದೆ)

---

## ಯುವಕರೆಲ್ಲರೊಂದಾಗಿ ಕನ್ಯೆಯರ ಗೋಳನ್ನು ನಿವಾರಿಸಬಲ್ಲಿರಾ! ಆ ಶಕ್ತಿ ತಮ್ಮಲ್ಲಿದೆ ಎಂಬುದನ್ನು ಸಮಾಜದಲ್ಲಿ ತೋರಿಸಿಕೊಡಿ!

ಯುವ ಜನಾಂಗಕ್ಕೆ ಒಂದು ಸಂದೇಶ!

ವರದಕ್ಷಿಣೆಯ ಪಿಡುಗು ನಿವಾರಣೆಯಾಗದೆ ವಿವಾಹವು ಪವಿತ್ರ ಬಂಧನವಾಗಲು ಸಾಧ್ಯವಿಲ್ಲ. ವಿವಾಹ ಪವಿತ್ರ ಬಂಧನವೆನಿಸದೆ ಕೌಟುಂಬಿಕ ಶಾಂತಿ-ಸಾಮರಸ್ಯ ನೆಲೆಗೊಳ್ಳುವುದಿಲ್ಲ. ಕೌಟುಂಬಿಕ ಸಾಮರಸ್ಯ ಸ್ಥಿರವಾಗದೆ ಕುಟುಂಬವು ಸತ್ಪ್ರಜೆಗಳ ನಿರ್ಮಾಣವಾಗದು. ಸತ್ಪ್ರಜೆಗಳ ನಿರ್ಮಾಣವಾಗದೆ ಸಮಾಜದಲ್ಲಿ ಉನ್ನತಿ, ಶಾಂತಿ, ಸೌಹಾರ್ದತೆಗಳು ಉಂಟಾಗಲಾರವು. ಈ ರೀತಿ ಒಂದಕ್ಕೊಂದು ಹೊಂದಿಕೊಂಡಿದೆ

---

ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ
ಭವಬಂಧನ ತೊಡೆದು ಹರಜನ್ಮವ ಮಾಡಿದ ಗುರುವೇ
ಭವಿಯೆಂಬುದ ತೊಡೆದು ಭಕ್ತಿಯೆಂದೆನಿಸಿದ ಗುರುವೇ
ಚನ್ನಮಲ್ಲಿಕಾರ್ಜುನನೆ ತಂದೆನ್ನ ಕೈವಶಕ್ಕೆ ಕೊಟ್ಟ

ಗುರುವೇ ಶರಣು



# ಗ್ರಾಮಾಂತರ ಬಸವ ಜಯಂತಿ

ಹೆಚ್. ವಿ ವೀರಭದ್ರಯ್ಯ
ಕನ್ನಡ ಉಪನ್ಯಾಸಕರು, ಸಿದ್ದಗಂಗಾ ಕಾಲೇಜು, ತುಮಕುರು.

ಆತ್ಮೀಯ ಶರಣ ಬಂಧು

ಅದೊಂದು ಅದ್ಭುತ ಸಮಾರಂಭ. ನೋಡುವ ಕಣ್ಣಿಗೆ ಸಿರಿ. ಇತಿಹಾಸದ ಚಲುವಿನ ಬೀಡು. ಧರ್ಮದ ನಾಡು ಹರವನಹಳ್ಳಿಯನ್ನೊಳಗೊಂಡ ಪ್ರದೇಶ. ವೀರಶೈವ ಧರ್ಮದ ತೌರು ಶರಣತತ್ವಗಳು ಪುನರುತ್ಥಾನಗೊಂಡದ್ದು ಅಲ್ಲಿ ಗೋಸಲ ಸಿದ್ದೇಶ್ವರ, ಗೋಸಲ ಚೆನ್ನಬಸವೇಶ್ವರ, ತೋಂಟದ ಸಿದ್ದಲಿಂಗಯತಿಗಳ ಪುಣ್ಯನಾಮ. ಚಾಮರಾಜರ ಹೆಸರು ಚಿರಸ್ಥಾಯಿಯಾದ ಊರು ಚಾಮರಾಜನಗರ ಅದಕ್ಕೊಂದು ಇರುವ ಹೆಸರು ಅಲ್ಲಿ ಬಸವ ಜಯಂತಿ. ದಿನಾಂಕ 22-5-1985 ರಂದು ಶರಣಧ್ವಜದ ಆರೋಹಣ. ನಂಜನಗೂಡು ತಾಲ್ಲೋಕು ಮಲ್ಲಿನ ಮೂಲೆ ಶರಣ ಪರಂಪರೆಯ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಚೆನ್ನಬಸವ ಸ್ವಾಮಿಗಳವರಿಂದ ಹೂಮಳೆಯ ಮಧ್ಯೆ ಷಟ್‌ಸ್ಥಲ ಧ್ವಜ ಬಾನಂಗಳದಲ್ಲಿ ಗರಿಗೆದರಿತು. ಶ್ರೀ ಸಿದ್ಧಮಲ್ಲೇಶ್ವರ ವಿರಕ್ತ ಮಠ ಬಸವ ಜಯಂತಿ ಮಿಗಿಲಾಗಿ ಅಂದು ಆ ಮಠದ ಚರಪಟ್ಟಾಧಿಕಾರತನನ್ನು ಅರ್ಪಿಸಿಕೊಂಡು ಧನ್ಯವೆನಿಸಿತು. ಜಯಂತಿಗೊಂದು ಸುವರ್ಣದ ಗುರಿ ಸೇರಿಸಿತು. ಮಹೋತ್ಸವವೂ ನೆರವೇರಿತು. ಶ್ರೀ ಮಠದ ಉಭಯ ಶ್ರೀ ಶ್ರೀಗಳೂ, ಶ್ರೀ ಮಠದ ಭಕ್ತಸ್ತೋಮವೂ ಬಸವ ತತ್ವ ದಾಸೋಹದಲ್ಲಿ ವೈಮನಗಳ ಸುಳಿಯಲ್ಲಿ ಅರಳಿತು.

ಸಮಾರಂಭವನ್ನು ಉದ್ಘಾಟಿಸುತ್ತ ಸುತ್ತೂರು ವೀರಸಿಂಹಾಸನಾಧೀಶ್ವರರಾದ ಪರಮ ಪೂಜ್ಯ, ರಾಜಗುರು ತಿಲಕ, ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರು – ಸಮಾಜ, ಮಾನವ ಜೀವನ ಸುಧಾರಣೆಯಾಗಬೇಕು ಪರಮ ಪೂಜ್ಯ ಸಿದ್ಧಗಂಗಾ ಶ್ರೀ ಶ್ರೀ ಗಳವರು ಗ್ರಾಮಾಂತರ ಬಸವ ಜಯಂತಿ ಆಚರಣೆಯ ಮೂಲಕ ನವಜಾಗ್ರತಿಯನ್ನುಂಟು ಮಾಡುತ್ತ ನಡೆದಿದ್ದಾರೆ ಸಮಾರಂಭದ ಅಂಗವಾಗಿ ಶಿವಾನುಭವ ಸಮ್ಮೇಳನಗಳನ್ನು ನಡೆಸುತ್ತಿರುವುದಂತೂ ಅರ್ಥಪೂರ್ಣವಾಗಿದೆ. ಮಾನವನ ಬದುಕು ಮೃಗೀಯವಾಗಬಾರದು. ದ್ವೇಷಾ ಸೂಯೆಗಳಿಲ್ಲದೆ ಬಾಳುವ ಕಲೆ ನಮ್ಮದಾಗಬೇಕು. ಜ್ಞಾನ ಹೀನರಾದರೆ ಪಶು ಸಮಾನರಾಗುತ್ತೇವೆ. ಎಂಬತ್ತನಾಲ್ಕು ಲಕ್ಷ ಜನ್ಮ ಕಳೆದು ದಮೇಲೆ ಮಾನವಜನ್ಮ ಪ್ರಾಪ್ತವಾಗಿದೆ, ಬಹುಜನ್ಮದ ಪುಣ್ಯ ಅದು ಸುಧಾರಿಸಬೇಕು.

ಇಂದು ಕೃತಜ್ಞತೆಯಿಲ್ಲದ ಬಾಳು ಎಲ್ಲೆಲ್ಲೂ ವಿಜೃಂಭಿಸಿದೆ. ಗುರುಬೇಡ, ಲಿಂಗಬೇಡ,
ಜಂಗಮ ಬೇಡ, ವಿಭೂತಿ ಬೇಡ, ರುದ್ರಾಕ್ಷಿ ಬೇಡ, ಪಾದೋದಕ ಪ್ರಸಾದಬೇಡ,
ಮಂತ್ರ ಬೇಡ, "ಆರುನಾನೆಂದು ವಿಚಾರಿಸು"— ಎಂಬ ಮಂತ್ರದ ಚಿಂತನೆಇಲ್ಲ—
ಎಂಬುದಾಗಿ ಆಶೀರ್ವಚನ ಮಾಡಿದರು.

ಸದಗೂರು ಮಠದ ಪೂಜ್ಯ ಶ್ರೀ ಶ್ರೀ ಗಳವರಿಂದ ಮತ್ತು ಕರುಹಟ್ಟಿಮಠದ
ಶ್ರೀ ಶ್ರೀ ಗಳವರಿಂದ ಭಾವ ಚಿತ್ರಗಳ ಅನಾವರಣವಾದದ್ದು ಸಮಾರಂಭದ ಶೋಭೆ.
ಅಂತೆಯೇ ಸ್ಮರಣ ಸಂಚಿಕೆಯೊಂದು ಪ್ರಕಟವಾದದ್ದು ಇನ್ನೊಂದು ದಾಖಲೆ.

ಕುಂದೂರು ಮಠದ ಪೂಜ್ಯ ಶ್ರೀ ಶ್ರೀ ಗಳವರಾದ ಇಮ್ಮಡಿ ಶಿವಬಸವ ಸ್ವಾಮಿ
ಗಳವರು ಮಠಗಳಿಂದು ಮಹತ್ವದ ಪಾತ್ರವಹಿಸ ಬೇಕಾಗಿದೆ. ಮಠಾಧಿಪತಿಗಳು ವಿದ್ವ
ದ್ಗಣಿಗಳಾಗ ಬೇಕಾಗಿದೆ. ಅಂತಃ ಕರುಣ ಪೂರ್ಣ ರತ್ನ ಮೂರ್ತಿಗಳಾಗಬೇಕಾಗಿದೆ.
ಒಳಜಗಳಗಳಿಂದ ಮುಕ್ತರಾಗಬೇಕು. ಸಮಾಜದ ಅಭಿವೃದ್ಧಿಗಾಗಿ ಶ್ರಮವಹಿಸಿ
ಮುಂದುವರಿಯ ಬೇಕಾಗಿದೆ. ಮೌಢ್ಯಗಳಿಂದ ದೂರವಾಗುತ್ತ, ಸದಾಚಾರ, ಸದ್ವಿ
ಚಾರಗಳನ್ನು ಬಿತ್ತಬೇಕಾಗಿದೆ ಲೋಕ ಶಿಕ್ಷಣದ ಜೊತೆಗೆ ಧಾರ್ಮಿಕ ಶಿಕ್ಷಣದ
ಅಗತ್ಯವನ್ನು ಪೂರೈಸಬೇಕಾಗಿದೆ—" ಎಂಬುದಾಗಿ ಉಪನ್ಯಾಸ ಮಾಡಿದರು.

ರಾಣೆಬೆನ್ನೂರಿನ ಶ್ರೀ ವಿ. ವಿ. ಸಂಗಮದ ಮತ್ತು ತುಮಕೂರು ಸಿದ್ಧಗಂಗಾ
ಕಾಲೇಜಿನ ಶ್ರೀ ಹೆಚ್. ವಿ ವೀರಭದ್ರಯ್ಯ ಅವರುಗಳು ಬಸವಣ್ಣನನ್ನು ಕುರಿತು ಉಪ
ನ್ಯಾಸ ಮಾಡಿದರು.

•

" ಇದು ವಿಜ್ಞಾನಯುಗ ವೈಚಾರಿಕಯುಗ. ಮಾನವ ಅನ್ಯಗ್ರಹಗಳ ಮೇಲೆ
ವಿಕ್ರಮ ಸಾಧಿಸಿರುವ ಕಾಲ. ಇಂಥ ಸನ್ನಿವೇಶದಲ್ಲಿ ಬಸವ ಜಯಂತಿಯ ಆಚರಣೆಗೆ
ಅರ್ಥವಿದೆಯೆ? ಎಂಬ ಪ್ರಶ್ನೆ ಯುವ ಜನಾಂಗದಲ್ಲಿ ತಲೆ ಎತ್ತುವುದು ಸಹಜ ಸ್ವಾಭಾ
ವಿಕ. ಬಸವಣ್ಣ ಏನು ಮಾಡಿದ? ಏಕೆ ಅವನ ಜಯಂತಿ? ಇಂದು ಅವನೆಷ್ಟು ಪ್ರಸ್ತುತ?
ಎಂಬ ಪ್ರಶ್ನೆಗಳಿಗೆಲ್ಲ ಉತ್ತರ ಕಂಡು ಕೊಳ್ಳುವ ಪ್ರಯತ್ನ ಗ್ರಾಮಾಂತರ ಬಸವ ಜಯಂತಿ
ಯ ಆಚರಣೆಯಾಗಿದೆ. ಬಸವಣ್ಣ Free Thinker, ಅಷ್ಟೇಅಲ್ಲ More practical
ಎಂಬುದನ್ನು ನಾವು ಗಮನಿಸಬೇಕು. ಜೀವನದ ಎಲ್ಲಾ ಕ್ಷೇತ್ರಗಳೂ ಇಂದು ದಿವಾ
ಳಿಯಾಗುತ್ತಿವೆ. ನೈತಿಕ ದಿವಾಳಿಯ ದೀಪಾವಳಿಯೇ ನಡೆದಿದೆ. ಎಲ್ಲೆಲ್ಲೂ ಧರ್ಮದ
ಅಂತರಂಗ ಕಾಯಕ ಮತ್ತು ದಾಸೋಹ. ದುಡಿಯದೆ ಉಣ್ಣುವ ಹಕ್ಕು ಯಾವ
ಜೀವಿಗೂ ಇಲ್ಲ. ಹಾಗೆ ಉಣ್ಣುವುದು ದೈವದ್ರೋಹ. ಅಷ್ಟೇ ಅಲ್ಲ ಆತ್ಮದ್ರೋಹ
ಸಮಾಜ, ಧರ್ಮವನ್ನು ಸರಿಯಾಗಿ ಪರಿಭಾವಿಸದೆ ಜಡ್ಡುಗಟ್ಟಿ ಹೋದಾಗ ಪರಿವ
ರ್ತನ ಪ್ರವರ್ತಕ ಪುಣ್ಯ ಚೇತನಗಳ ಆವಿರ್ಭಾವವಾಗುತ್ತದೆ. ಬಸವಣ್ಣನವರು ಬರು



ವುದಕ್ಕೆ ಮುಂಚೆ ಸಮಾಜ ಹಲವಾರು ಮೌಢ್ಯಗಳ ಸಂತೆಯನ್ನೇ ನಡೆಸಿತ್ತು. ಅವೆಲ್ಲ
ವುಗಳಿಗೆ ಪರಿಹಾರವಾಗಿ ಬಂದರು ಬಸವಣ್ಣ. ಮಹಾ ಮಾನವತಾವಾದಿಯಾಗಿ,
ಅಂತರಂಗ ಶೋಧನೆ ಮಾಡಿಕೊಳ್ಳುತ್ತಲೇ ವಿನಯ ಮೇರುವಾಗಿ ಬೆಳೆದರು. "ಅಪರಿ
ಗ್ರಹ" ತತ್ವವನ್ನು ಆಚರಣೆಯಲ್ಲಿ ತಂದ ಮಹಾಯಶಸ್ಸು ಬಸವಣ್ಣನವರಿಗೆ.' ಇಂದಿಂಗೆ
ನಾಳಿಂಗೆ ಎಂದು ಚಿಂತಿಸಿದೆ, ಅಂದಂದಿನ ಕಾಯಕವ ನಡೆಸಿದರು. ಕಾಯಕ ಸಮಾ
ಡವನ್ನು ಗೌರವಿಸುವುದಿಲ್ಲ. ಗೌಣವಾಗಿ ನೋಡುತ್ತದೆ. ಆತ್ಮದ ಉದ್ಧಾರಕ್ಕೆ
ಕಾಯಕ ರಾಜಮಾರ್ಗ. ಸಂಸಾರಿ, ಸನ್ಯಾಸಿ, ಎಲ್ಲರೂ ದುಡಿಯದೆ ಉಣ್ಣುವಂತಿಲ್ಲ.
ಬಸವಣ್ಣನವರ ದೃಷ್ಟಿಯಲ್ಲಿ ಸಂಸಾರ, ಲೋಕದ ಬದುಕು ಹೇಯವಲ್ಲ, ಪೂಜ್ಯ.
'ಮರ್ತ್ಯವೆಂಬುದು ಕರ್ತಾರನ ಕಮ್ಮಟ' ವೆಂದು ಗೌರವಿಸಿದ ಯಶಸ್ಸು ಅವರಿಗೆ.
"ಪೃಥ್ವಿಗಗ್ಗಳ ಚಲುವೆ'ಯರಾದ ಸತಿಯರು ಆ ಜೀವನ ಯೋಗಿಗೆ. ಸಂಸಾರವನ್ನು
ಶಿವಯೋಗವನ್ನಾಗಿ ಪರಿವರ್ತಿಸಿದ ಪುಣ್ಯಜೀವಿ ಬಸವಣ್ಣನವರು, ಜೀವನಕ್ಕೆ ವಿನೂ.
ತನ ದೃಷ್ಟಿ ತಂದುಕೊಟ್ಟ ಕೀರ್ತಿ ಅವರಿಗೆ. 'ಇವನಾರವ ಇವನಾರವ ಇವನಾರವ
ನೆಂದೆನಿಸವಿರಯ್ಯಾ, ಇವನಮ್ಮವ ಇವನಮ್ಮವ, ಇವನಮ್ಮವ ನೆಂದೆನಿಸಯಾ"-ಎಂದೇ
ಅವರು ಕೊಟ್ಟ ದಿವ್ಯ ಸಂದೇಶ ಎಂಬುದಾಗಿ ಪರಮಪೂಜ್ಯ ಸಿದ್ಧಗಂಗಾ ಶ್ರೀ ಶ್ರೀಗಳ
ವರು ಅಧ್ಯಕ್ಷ ಪೀಠದಿಂದ ಆಶೀರ್ವಚನ ಮಾಡಿದರು ಜಗಜ್ಯೋತಿ ಬಸವೇಶ್ವರ
ನಾಟಕ ಒಂದು ಯಕ್ಷಲೋಕವನ್ನೇ ಅಂದು ರಾತ್ರಿ ತೆರೆಯಿತು. ಮಳೆ ಬಂದು ನೆಲ
ಹಸಿಯಾಗಿದ್ದರೂ, ನಗರದ ಬಂಧುಗಳು ಭಕ್ತಿಪರವಶತೆಯಿಂದ ನಾಟಕ ನೋಡುವಲ್ಲಿ
ಮೈಮರೆತಿದ್ದರು. ಸಂಗೀತಕ್ಕೆ, ನಾಟಕಕ್ಕೆ ಹೆಸರಾಂತ ಚಾಮರಾಜನಗರ ಶ್ರೀ
ಕ್ಷೇತ್ರದ ಕಲಾಬಂಧುಗಳು ಅಭಿನಯಿಸಿದ ನಾಟಕ ನೋಡಿ ತಲೆದೂಗಿತು. "ಬಸವಣ್ಣ
ನಿನ್ನ ಸದು ದೆಸೆದೆಸೆಗೆ ಶಿವ ಮಂತ್ರ"- ಎಂದು ನಾಟಕದಲ್ಲಿ ಭಕ್ತರು ಹಾಡಿಕೊಂಡು
ಬಂದಾಗ ವರದಿಗಾರನ ಪಕ್ಕದಲ್ಲಿ ಕುಳಿತಿದ್ದ ದೇವನೂರಿನ ಗುರುಮಲ್ಲಪ್ಪ ಕಣ್ಣೀರು
ಸುರಿಸುತ್ತ, "ಹಾದು ಬುದ್ಧಿ, ಆ ಸನ್ನಪ್ಪನ ಹೆಸರಿಗಿಂತ ಬೇರೆಶಿವಮಂತ್ರ ಎಲ್ಲಿದೆ"-
ಎಂದು ಬಿಕ್ಕುತ್ತಿದ್ದ. ಪರಮಪೂಜ್ಯ ಶ್ರೀ ಶ್ರೀಗಳು ಆ ಬಂಧುವಿನ ಕಡೆಗೆ ಕೃಪಾದೃಷ್ಟಿ
ಚೆಲ್ಲಿದ್ದರು.

ಎತ್ತಣ ಮಾಮರ, ಎತ್ತಣ ಕೋಗಿಲೆ? ಎತ್ತಣ ಸಿದ್ಧಗಂಗಾ?
ಎತ್ತಣಚಾಮರಾಜನಗರ? ಎಂಬೆಯೇನು?

'ಎತ್ತೆತ ನೋಡಿದಡೆ ಅತತ್ತ ಬಸವನೆಂಬ ಬಳ್ಳಿ' ಎಂಬುದನ್ನು ಮರೆಯಲಾ
ದೀತೆ?

(ಮತ್ತೆ ಬರೆಯುತ್ತೇನೆ)

## ಸಿದ್ಧಗಂಗಾ ಮಾಸಿಕ ಪತ್ರಿಕೆಯು ಒಡೆತನ ಮತ್ತು ಇತರ ವಿವರಗಳ ಸಂಬಂಧಪಟ್ಟ ಮಾಹಿತಿ

ಫಾರಂ ೪

| | |
|---|---|
| ೧. ಪ್ರಕಟಣೆಯ ಸ್ಥಳ : | ಶ್ರೀ ಸಿದ್ಧಗಂಗಾ ಮಠ |
| ೨. ಪ್ರಕಟವಾಗುವ ಅವಧಿ : | ಮಾಸಿಕ |
| ೩. ಮುದ್ರಣ ಭಾಷೆ : | ಕನ್ನಡ |
| ೪. ಮುದ್ರಕರ ಹೆಸರು : | ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು |
| ರಾಷ್ಟ್ರೀಯತೆ ; | ಭಾರತೀಯ |
| ವಿಳಾಸ : | ಶ್ರೀ ಸಿದ್ಧಗಂಗಾ ಮಠ<br>ತುಮಕೂರು ಜಿಲ್ಲಾ (ಕರ್ನಾಟಕ) |
| ೫ ಪ್ರಕಾಶಕರ ಹೆಸರು : | ಹೆಚ್. ಬಿ. ಗಂಗಾಧರಯ್ಯ |
| ರಾಷ್ಟ್ರೀಯತೆ : | ಭಾರತೀಯ |
| ವಿಳಾಸ : | ಶ್ರೀ ಸಿದ್ಧಗಂಗಾ ಮಠ<br>ತುಮಕೂರು ಜಿಲ್ಲಾ, (ಕರ್ನಾಟಕ) |
| ೬. ಸಂಪಾದಕರ ಹೆಸರು : | ಶ್ರೀ ಹಂ॥ ಚನ್ನಪ್ಪ ಎರೇಸೀಮೆ |
| ರಾಷ್ಟ್ರೀಯತೆ: | ಭಾರತೀಯ |
| ವಿಳಾಸ : | ಶ್ರೀ ಸಿದ್ಧಗಂಗಾ ಮಠ<br>ತುಮಕೂರು ಜಿಲ್ಲಾ, (ಕರ್ನಾಟಕ) |
| ೭. ಪತ್ರಿಕೆಯ ಮಾಲೀಕರು : | ಶ್ರೀ ಶಿವಕುಮಾರ ಮಹಾ ಸ್ವಾಮಿಗಳು<br>ಶ್ರೀ ಸಿದ್ಧಗಂಗಾ ಮಠ<br>ತುಮಕೂರು ಜಿಲ್ಲಾ, (ಕರ್ನಾಟಕ) |
| ೮. ನೊಂದಣಿ ಸಂಖ್ಯೆ : | ಕೆ. ಆರ್. ಎಸ್. ಕ್ಯೂ. ೯. |

ನಾನು ಹೆಚ್. ಬಿ. ಗಂಗಾಧರಯ್ಯ, ಮೇಲಿನ ಅಂಶಗಳೆಲ್ಲ ಸತ್ಯ ಎಂದು ನನ್ನ ಜ್ಞಾನ ಮತ್ತು ನಂಬಿಕೆಗಳಿಂದ ದೃಢಪಡಿಸುತ್ತೇನೆ.

೧ ಮಾರ್ಚಿ ೧೯೮೬

ಸಿದ್ಧಗಂಗಾ ಮಠ

(ಸಹಿ) ಹೆಚ್. ಬಿ. ಗಂಗಾಧರಯ್ಯ,

ಪ್ರಕಾಶಕರು

LICENCED TO POST WITHOUT PRE PAYMENT LICENCE NO. 3
SIDDAGANGA MONTHLY Reg No. KRN C-9

# ಭಕ್ತಿ ಪೂರ್ವಕ ನಮನ

56 ವರ್ಷಗಳು ತುಂಬಿದುದು 3-3-1986 ಕ್ಕೆ
ಪರಮ ಪೂಜ್ಯ, ಡಾ|| ಶ್ರೀ. ಶ್ರೀ ಶಿವಕುಮಾರ ಸ್ವಾಮಿಗಳವರ
ತ್ರಿವಿಧ ಸೇವಾ ಮಣಿಹಕ್ಕೆ.
ಈ ಶುಭ ಸಂದರ್ಭದಲ್ಲಿ ನಾಡು ಶ್ರದ್ಧಾ ಭಕ್ತಿಗಳಿಂದ ತಲೆಬಾಗಿ ಮಣಿಯುತ್ತದೆ
ಶ್ರೀ ಶ್ರೀಗಳವರ ಚರಣ ದಿವ್ಯಗಳಿಗೆ.

ಈ ಸರ್ವಾಂಗ ಲಿಂಗಿಯಲ್ಲಿ ಯಾವುದನ್ನು ಮೆಚ್ಚುವುದೆಂದು ದಿಗ್ಭ್ರಮೆಯಾಗುತ್ತದೆ. ನಿಶ್ಚಿತ ಜ್ಞಾನವನ್ನೆ? ನಿರ್ಮಲ ಕ್ರಿಯೆಯನ್ನೆ? ಉಜ್ವಲ ವೈರಾಗ್ಯವನ್ನೆ? ಶಮ-ದಮಾದಿ ದೈವೀ ಸಂಪತ್ತನ್ನೆ? ಬಹು ಭಾಷಾ ಪಾರಂಗತಿಯನ್ನೆ? ಪವಿತ್ರ ಜೀವನವನ್ನೆ? ಸಕಲ ಜೀವರಾಶಿಗಳನ್ನೂ ತನ್ನ ತೆಕ್ಕೆಯಲ್ಲಿ ಒಳಗೊಳ್ಳುವ ಅಪಾರ ಅನುಕಂಪೆಯನ್ನೆ? ಬೆಕ್ಕಸ ಬೆರಗುಗೊಳಿಸುವ ಶಿಕ್ಷಣ ಸಂಸ್ಥೆಗಳ ಸಂಸ್ಥಾಪನೆಯನ್ನೆ? ಪಂಡಿತ ಪಾಮರರಿಬ್ಬರನ್ನು ಏಕ ಪ್ರಕಾರವಾಗಿ ನೆಚ್ಚಿಸುವ ಮಾತುಗಾರಿಕೆಯನ್ನೆ? ವೈಜ್ಞಾನಿಕ ದೃಷ್ಟಿಯನ್ನೆ? ಆಧ್ಯಾತ್ಮಿಕ ಔನ್ನತ್ಯವನ್ನೆ? ಸ್ವಧರ್ಮ ನಿಷ್ಠೆ ಪರಧರ್ಮ ಸಹಿಷ್ಣುತೆಗಳನ್ನೆ? ವಿದ್ಯಾರ್ಥಿಗಳ ಮೇಲಿನ ವಾತ್ಸಲ್ಯವನ್ನೆ? ರಾಷ್ಟ್ರ ನಿರ್ಮಾಣ ಕಾರ್ಯ ದುರಂಧರತೆಯನ್ನೆ? ದೀನ ಬಂಧುತ್ವವನ್ನೆ? ಕವಿ ಕಲಾವಿದ ವಿದ್ವಾಂಸರಿಗೆ ನಿರಂತರ ನೀಡುತ್ತಿರುವ ಆಶ್ರಯವನ್ನೆ? ಸಾಹಿತ್ಯ ಸಂಸ್ಕೃತಿಗಳ ಪೋಷಣೆಯನ್ನೆ? ಸಂಘಟನಾ ಶಕ್ತಿಯನ್ನೆ? ಶಿವಮಂತ್ರ ಸಿದ್ಧಿಯನ್ನೆ? ಎಷ್ಟು ಜನರು ಬಂದು ಬೇಡಿ ಕಾಡಿದರೂ, ಎಂಥ ವಿಘ್ನಗಳು ಎದುರಾದರೂ, ಎಳ್ಳಷ್ಟೂ ಬೇಸರ ಮುನಿಸು, ದಣಿವುಗಳನ್ನು ತೋರದ ಸದಾ ಸುಪ್ರಸನ್ನ ವದನವನ್ನೆ? ಬಹು ವಿಷಯ ಪರಿಣತಿಯನ್ನೆ? ಜಗಳಗಳನ್ನು ಬಗೆಹರಿಸುವ ವ್ಯವಹಾರ ಕುಶಲತೆಯನ್ನೆ? ದಿನದಿನವೂ ಎಣಿಕೆಯಿಲ್ಲದಂತೆ ಬರುವ ಭಕ್ತರ ವೈಯಕ್ತಿಕ ಸಮಸ್ಯೆಗಳಿಂದ ಆರಂಭಿಸಿ ದಾಸೋಹ, ವಿದ್ಯಾರ್ಥಿನಿಲಯ, ಶಾಲೆ ಕಾಲೇಜುಗಳ ಜಟಿಲ ಸಮಸ್ಯೆಗಳವರೆಗೆ ಎಲ್ಲವನ್ನು ಲೀಲಾಜಾಲವಾಗಿ ಪರಿಹರಿಸುವ ಪರಮಾದ್ಭುತವನ್ನೆ? ಉದ್ಧರಣೆಗಳನ್ನು ಬರೆಯುವುದರಿಂದ ಜೀರ್ಣೋದ್ಧಾರದ ಸಮಗ್ರ ಯೋಜನೆಗಳವರೆಗೆ ಸರ್ವಕಾರ್ಯಗಳಲ್ಲಿಯೂ ಒಡಮೂಡುವ ಕಾಯಕ ನಿಷ್ಠೆಯನ್ನೆ? ಗಡಿಯಾರವೂ ನಾಚಿಕೊಳ್ಳುವಂಥ ಸಮಯ ಪರಿಪಾಲನೆಯನ್ನೆ? ಶರಣ ವಿಜಯ, ಜಿತೇಂದ್ರಿಯತ್ವಗಳನ್ನೆ? ಆಲೋಚಿಸಿದಷ್ಟೂ ಅಪಾರವಾಗಿ ತೋರುವ ಈ ಆಧ್ಯಾತ್ಮ ಸಾಮ್ರಾಜ್ಯದ ಅಗಾಧವಾದ, ಅವರ್ಣನೀಯವಾದ ವ್ಯಕ್ತಿತ್ವದ ಎಲ್ಲ ಅಂಶಗಳನ್ನೂ ಗುರುತಿಸಿ ಅವುಗಳ ಬಟ್ಟ ಬೆಲೆಯನ್ನು ಕಟ್ಟಬಲ್ಲವರಾರು?

—ಡಾ|| ಸಿದ್ದಯ್ಯ ಪುರಾಣಿಕ (ಆಧಾರ-ಸಿದ್ಧಗಂಗಾಶ್ರೀ)